

ಶಿಲ್ಪಿ ವೀರಪ್ಪ ಕುಂಬಾರ ಕೊಟ್ಯಾಳಕರ್‌ರ

# ಕಲಾಜೀವನ

- ಜಿ. ಲಕ್ಷ್ಮೀಪತಿ




ಕರ್ನಾಟಕ ಶಿಲ್ಪಕಲಾ ಅಕಾಡೆಮಿ

ಮೊದಲನೆ ಮಹಡಿ, ಕನ್ನಡ ಭವನ, ಚಾಲುಕ್ಯ ವಿಭಾಗ, ಜೆ.ಸಿ.ರಸ್ತೆ, ಬೆಂಗಳೂರು - 560 002

# ಶಿಲ್ಪಿ ವೀರಪ್ಪ ಕುಂಬಾರ ಕೊಟ್ಯಾಳ್ಕರ್‌ರ ಕಲಾಜೀವನ

ಜಿ. ಲಕ್ಷ್ಮೀಪತಿ




ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಮೇಲ್ಮನೆ, ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು – 560 002.
ದೂರವಾಣಿ/ಫ್ಯಾಕ್ಸ್ : 080–22278725

**'Shilpi Veerappa (Kumbara) Yellappa Kotyalkar - Kalajeevana'**
by G. Lakshmipathy
Published by Karnataka Shilpakala Academy
Kannada Bhavana, J. C. Road, Bangalore - 560 002.

Photographs by : **Sri G. Lakshmipathy**
Email : pathy777@indiatimes.com

Drawings Edited by : **Sri Murali**

ಪ್ರಕಾಶಕರು :
**ಪದ್ಮಜಕುಮಾರಿ ಎನ್.**
ರಿಜಿಸ್ಟ್ರಾರ್
ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಮೇಲ್ಮನೆ, ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು - ೫೬೦ ೦೦೨

ಪುಟಗಳು : ೪೦ + ೪೮ + ೧೬
ಪ್ರತಿಗಳು : ೫೦೦

ವರ್ಷ : ೨೦೦೮

ಬೆಲೆ : ರೂ. ೨೫.೦೦

ಮುಖಪುಟ
ಶಿಲ್ಪ : ಗಣೇಶ ಮತ್ತು ಸಿದ್ಧಿ, ಬುದ್ಧಿ
ಶ್ರೀ ವೀರಪ್ಪ ಕುಂಬಾರರ ಕಲಾಕೃತಿ

ಮುದ್ರಕರು :
**ಎಂ. ಎಸ್. ಗ್ರಾಫಿಕ್ಸ್**
ನಂ.೧, ವಿನಾಯಕ ಬಡಾವಣೆ, ಮಾಗಡಿ ಮುಖ್ಯ ರಸ್ತೆ
ಬೆಂಗಳೂರು - ೫೬೦೦೭೯. ದೂರವಾಣಿ : ೦೮೦-೨೩೪೮೮೪೨೯

*Special thanks to :*

**Sri R.N. Hegde**
Director, Archeology and Museum Department
Government of Maharastra, Mumbai.

**Smt. Gayathri Devi Panth Prathinidhi**
Aund Palace, Aund.

**Sri Praveen Shinde**
Chief Curator of Sri Bhavani Museum, Archeology
and Museum Department, Satara District.

**Sri G.K Gosayee**
Asst. Curator of Sri Bhavani Museum, Aund,

**Family members of**
**Veerappa (Kumbara) Yellappa Kotyalkar**
Manugooli, Basavana Bagewadi Taluk
Bijapur District, Karnataka

Karnataka Shilpakala Academy President, All Members, Registrar,
Superintendent and Staff of the Academy.

# ಅಧ್ಯಕ್ಷರ ನುಡಿ

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಪ್ರಮುಖ ಯೋಜನೆಗಳಲ್ಲಿ ರಾಜ್ಯದ ಹಿರಿಯ ಶಿಲ್ಪಕಲಾವಿದರು ಮತ್ತು ಅವರ ಸಾಧನೆ ಬಗ್ಗೆ ಪುಸ್ತಕಗಳನ್ನು ಪ್ರಕಟಿಸಿ ಶಿಲ್ಪಕಲಾ ಪರಂಪರೆ ನಡೆದು ಬಂದ ದಾರಿ, ಶೈಲಿಗಳ ಬಗ್ಗೆ ಪರಿಚಯ ಮೂಡಿಸುವುದಲ್ಲದೆ ಶಿಲ್ಪಕಲೆಯ ಮಹತ್ವದ ಬಗ್ಗೆ ಅರಿವು ಮೂಡಿಸಲು ಸಹಕಾರಿಯಾಗುವ ಯೋಜನೆಯಲ್ಲಿ ಶಿಲ್ಪಕಲೆಗೆ ಸಂಬಂಧಿಸಿದ ಸುಮಾರು ಪುಸ್ತಕಗಳು ಈಗಾಗಲೇ ಪ್ರಕಟಗೊಂಡಿದ್ದು ಅತ್ಯಂತ ಜನಪ್ರಿಯವಾಗಿವೆ. ಪ್ರಸ್ತುತ ಶಿಲ್ಪಿ ವೀರಪ್ಪ ಕುಂಬಾರ ಕೊಟ್ಯಾಳ್ಕರ್ ಇವರು ಅಪ್ರತಿಮ ಶಿಲ್ಪಕಲಾವಿದರು. ವಾಸ್ತವಶೈಲಿ ಹಾಗೂ ಸಾಂಪ್ರದಾಯಿಕ ಶೈಲಿಗಳೆರಡರಲ್ಲೂ ಪರಿಣಿತರು. ಬ್ರಿಟಿಷ್ ಕಲೋನಿಯಲ್ ಪ್ರಭಾವದ ದಿನಗಳಲ್ಲಿ ಅತಿ ಉತ್ತಮ ಶಿಲ್ಪಗಳನ್ನು ರಚಿಸಿ ಹೆಸರುಗಳಿಸಿದ್ದು, ಇಂತಹ ಶಿಲ್ಪಕಲಾವಿದರನ್ನು ತಮ್ಮ ಯುವ ಶಿಲ್ಪಿಗಳಿಗೆ ಪರಿಚಯಿಸುವುದರ ಮೂಲಕ ಶಿಲ್ಪ, ಶಿಲ್ಪಿಯ ಮಹತ್ವ ತಿಳಿದಂತಾಗುವುದು. 2006ನೇ ಸಾಲಿನ ಶಿಲ್ಪಕಲಾ ಅಕಾಡೆಮಿಯ ವಾರ್ಷಿಕ ಗೌರವ ಪ್ರಶಸ್ತಿ ಸ್ವೀಕರಿಸಿದ ಇವರಿಗೆ, ಅಕಾಡೆಮಿಯು ಶತಮಾನೋತ್ಸವವನ್ನು ಆಚರಿಸುತ್ತಿರುವ ಸಂದರ್ಭದಲ್ಲಿ ಈ ಪರಿಚಯ ಪುಸ್ತಕವನ್ನು ಹೊರತರುವಲ್ಲಿ ಸಂತಸ ಪಡುತ್ತದೆ.

ಈ ಪುಸ್ತಕವನ್ನು ಶಿಲ್ಪಕಲಾ ಅಕಾಡೆಮಿಯ ಸದಸ್ಯರಾದ ಶ್ರೀ ಜಿ. ಲಕ್ಷ್ಮೀಪತಿ ಅವರು ಕುಂಬಾರರನ್ನು ಸಂದರ್ಶಿಸಿ, ಮನಗೂಳಿ ಹಾಗೂ ಮಹಾರಾಷ್ಟ್ರದ ಔಂಧ್‌ನಲ್ಲಿ ಕ್ಷೇತ್ರಕಾರ್ಯವನ್ನು ಮಾಡಿ ಸ್ವತಃ ಛಾಯಾಚಿತ್ರಗಳನ್ನು ತೆಗೆದು ಅತ್ಯಂತ ಶ್ರಮವಹಿಸಿ ರಚಿಸಿಕೊಟ್ಟಿದ್ದಾರೆ. ಇದಕ್ಕೆ ಪೂರಕವಾಗಿ ರೇಖಾಚಿತ್ರ, ಶಿಲ್ಪಗಳ ಚಿತ್ರಗಳು ಸೊಗಸಾಗಿ ಮೂಡಿ ಬಂದಿವೆ. ಅವರಿಗೂ ಧನ್ಯವಾದ. ಈ ಪುಸ್ತಕ ಹೊರತರಲು ಸಹಕರಿಸಿದ ಶಿಲ್ಪಕಲಾ ಅಕಾಡೆಮಿಯ ಎಲ್ಲ ಸದಸ್ಯರು ಹಾಗೂ ರಿಜಿಸ್ಟ್ರಾರ್‌ರವರಿಗೂ ವಂದನೆಗಳು. ಕಲಾವಿದರು, ಕಲಾರಸಿಕರು, ಸಾಹಿತ್ಯಾಭಿಮಾನಿಗಳು ಈ ಕೃತಿಯನ್ನು ಸ್ವಾಗತಿಸುತ್ತಾರೆಂದು ಆಶಿಸುತ್ತೇನೆ.

**– ವೆಂಕಟಾಚಲಪತಿ**

# ಶಿಲ್ಪಿ ವೀರಪ್ಪ ಕುಂಬಾರ ಕೊಟ್ಯಾಳ್ಕರ್‌ರ ಕಲಾಜೀವನ

ಕಲೆಯ ಅನಾವರಣವು ವಾಸ್ತವ, ಕ್ರಿಯಾತ್ಮಕ ರೂಪದಲ್ಲಿ ಮೂಡಿಬರದೆ, ಕಲಾವಿದನ ಪೂರ್ವ ಗ್ರಹಿಕೆ, ಅನುಭವ, ಸ್ಫೂರ್ತಿ ಸೆಲೆಯ ಅನಿಸಿಕೆಗಳನ್ನು ವ್ಯಕ್ತಪಡಿಸುವುದೇ ಆಗಿದೆ. ಪ್ರತಿಭೆಯ ಅನಾವರಣವು ವಸ್ತುವಿನ ಆಯ್ಕೆಗೆ ಸೀಮಿತಗೊಳ್ಳದೆ ಅದನ್ನು ಪರಿಪೂರ್ಣವಾಗಿ ಅರ್ಥೈಸಿ, ಬಳಕೆಮಾಡಿ, ಸೃಷ್ಟಿಸಿ ನಿರ್ವಹಿಸಿದರೆ ಕಲೆಯ ನಿಜವಾದ ಅಭಿವ್ಯಕ್ತಿಯ ವಿವರಗಳು ನಾನಾ ರೀತಿಯ ಅನುಭವಗಳನ್ನು ಹೊರಹೊಮ್ಮಿಸುತ್ತದೆ. ಅದು ತನ್ನ ಅಸ್ತಿತ್ವದ ಸಾಮರ್ಥ್ಯ, ಅಭಿಪ್ರಾಯ, ಉದ್ದೇಶಗಳ ದೃಢ ಸಂಕಲ್ಪವು ಬಾಹ್ಯಲೋಕದ ಅಭಿಮಾನ, ಪ್ರೋತ್ಸಾಹ, ಪ್ರೇರಣೆಯ ಸ್ಫೂರ್ತಿಯು, ಕಲಾವಿದನ ಕಲಾತ್ಮಕ ಕ್ರಿಯಾಶೀಲ ಯೋಚನೆಗಳಿಗೆ ಚಾಲನೆ ನೀಡುತ್ತದೆ.

ಒಬ್ಬ ಕಲಾವಿದನ ಕ್ರಿಯಾಶೀಲ ಪ್ರತಿಭೆಯು ಸ್ವಯಂಸಾಮರ್ಥ್ಯದ ವಿವೇಚನೆಯಿಂದ ಮೂಡುವುದು ಒಂದು ಪರಿಯಾದರೆ, ಪ್ರತಿಭಾವಂತರು ಇತರೆಡೆಯಿಂದ ಎರವಲು ಪಡೆಯುವ ಸಾಮರ್ಥ್ಯದ ಲಕ್ಷಣವೇ ಇನ್ನೊಂದು ಪರಿ. ಈ ಎರಡು ಲಕ್ಷಣಗಳು ನಮ್ಮ ಭಾರತೀಯ ಕಲೆಯ ವಿಭಿನ್ನ ಶೈಲಿಗಳನ್ನು ಸಮೀಕರಿಸಿ ನೋಡುವಂತೆ ಮಾಡಿವೆ.

ಭಾರತೀಯ ಕಲೆಯ ವಿಚಾರವನ್ನು ಗಮನಹರಿಸಿ ಬೆಳೆದುಬಂದ ದಿಕ್ಕನ್ನು ನೋಡಿದಾಗ, ಭಾರತದ ಸಾಂಸ್ಕೃತಿಕ ಪರಂಪರೆಯ ಆಚರಣೆಯ ಮನೋಧರ್ಮವು ಕಲೆಯನ್ನು ಆರಾಧಿಸಿ, ತನ್ನ ಸಂಸ್ಕೃತಿಯ ಪ್ರತಿಯೊಂದು ಆದರ್ಶ, ಅಭಿಪ್ರಾಯ, ಹೇಳಿಕೆಗಳನ್ನು ಕಲಾ ಸೃಷ್ಟಿಯ ಮುಖೇನ ಪ್ರತಿನಿಧಿಸುತ್ತಾ ಸಾಗಿಬಂದಿದೆ.

'ಈ ನಮ್ಮ ಶಿಲ್ಪಕಲೆಯು ಕೇವಲ ಬಾಹ್ಯೇಂದ್ರಿಯಗಳಿಗೆ ಮಾತ್ರವೇ ಸಂತೃಪ್ತಿಯನ್ನು ಗಳಿಸಿಕೊಡುವುದು ಆಗಬಾರದು, ಬಾಹ್ಯೇಂದ್ರಿಯ ಸಂತರ್ಪಣೆಯೊಂದಿಗೆ ಮಾನಸಿಕ ಅಭಿರುಚಿ, ಸಂಸ್ಕಾರಗಳನ್ನು ಶುದ್ಧಿಗೊಳಿಸಿ ಮೇಲಕ್ಕೇರಿಸುತ್ತಾ, ಅವು ಸಾಕ್ಷಾತ್ಕಾರಕ್ಕೆ ಸಾಧನವಾದಾಗ ಶಿಲ್ಪಿಗೆ, ಶಿಲ್ಪಕ್ಕೆ, ಶಾಸ್ತ್ರಕ್ಕೆ, ಲೋಕಕ್ಕೆ ಕೃತಕೃತ್ಯತೆಯು ಲಭಿಸುತ್ತದೆ' ಎಂದು ಸಾಂಪ್ರದಾಯವಾದಿ ಶಿಲ್ಪಶಾಸ್ತ್ರಜ್ಞರ ಅಭಿಪ್ರಾಯವಾಗಿದೆ.

ಶಿಲ್ಪಶಾಸ್ತ್ರದ ಅಧ್ಯಯನಗಳ ಪ್ರಕಾರ ಶಿಲ್ಪದ ಸೃಷ್ಟಿಯನ್ನು, ಅಪರಿಮಿತ ಶಿಷ್ಟಾಚಾರ ಪಾಲಿಸುವವರು ಮಾತ್ರ ಸೃಷ್ಟಿಸಬಲ್ಲರು ಎಂಬ ವಿಚಾರವನ್ನು ಮಂಡಿಸಿರುವ ಬ್ರಹ್ಮವೈವರ್ತ ಪುರಾಣದಲ್ಲಿ ವಿಶ್ವಕರ್ಮನ ಒಂಭತ್ತು ಜನ ಪುತ್ರರನ್ನು 'ಶಿಲ್ಪ ಕಾರಣಿಕ' (ಶಿಲ್ಪಕಾರರು) ಎಂಬ ಹೆಸರಿನಿಂದ ಕರೆಯಲಾಗಿದ್ದು, ಅವರ ಹೆಸರುಗಳು, 1) ಮಾಲಾಕಾರ (ತೋಟಿಗ), 2) ಕರ್ಮಕಾರ (ಕಮ್ಮಾರ), 3) ಶಂಬಕಾರ (ಶಂಖದ ಮೇಲೆ ಬರೆಯುವವ), 4) ಕುವಿಂದಕ (ನೇಕಾರ), 5) ಕುಂಭಕಾರ (ಕುಂಬಾರ), 6) ಕಾಂಸಕಾರ (ಕಂಚುಕಾರ), 7) ಸೂತ್ರಧಾರ (ಬಡಗಿ), 8) ಚಿತ್ರಕಾರ ಮತ್ತು ಸ್ವರ್ಣಕಾರ (ಅಕ್ಕಸಾಲಿಗ) ಎಂತಲೂ, "ಅಗ್ನಿ ಪುರಾಣ"ದಲ್ಲಿ ಒಂದು ಸಹಸ್ರ ಶಿಲ್ಪಗಳನ್ನು ಸೂಚಿಸಲಾಗಿದ್ದು ಅವುಗಳನ್ನು ಜೀವನೋಪಾಯದ ಮಾಧ್ಯಮ ಎಂದು ಹೇಳಲಾಗಿದೆ.

ಈ ರೀತಿಯ ಶಾಸ್ತ್ರಗ್ರಂಥ, ಪುರಾಣ, ಸಂಪ್ರದಾಯ, ಸಂಸ್ಕೃತಿಯ ಸವೆದ ಹಾದಿಯಲ್ಲಿ ಭಾರತೀಯ ಶಿಲ್ಪವು ತನ್ನ ವಿವಿಧ ನೆಲೆಗಳ, ಆಯಾಮಗಳ ಮುಖೇನ ವಿಸ್ತಾರವಾದ ಐತಿಹ್ಯವನ್ನು ಕಟ್ಟಿಕೊಂಡು ಸಾಗಿಬಂದಿದೆ.

ಕಾಲಚಕ್ರಗಳು ಉರುಳಿದಂತೆ ಅಸಂಖ್ಯಾತ ಬದಲಾವಣೆಗಳು, ಕ್ರಾಂತಿಗಳು ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿ ಧರ್ಮ, ಆಡಳಿತ ಪ್ರಭಾವಗಳಿಗೆ ಒಳಗಾಗಿ ಪರಿವರ್ತನೆಗಳಿಗೆ ಅವಕಾಶ ನೀಡಿದ್ದರೂ, ಗಟ್ಟಿಯಾದ ಸಾಂಸ್ಕೃತಿಕ ವೈಭವೀಕರಣವನ್ನು ಉಳಿಸಿಕೊಳ್ಳುವಲ್ಲಿ, ತಕ್ಕಮಟ್ಟಿಗೆ ಉಳಿಸಿಕೊಂಡು ಬಂದಿರುವುದಕ್ಕೆ ನಮಗೆ ದೊರೆತಿರುವ ಅಳಿದು-ಉಳಿದಿರುವ ಪ್ರಾಚ್ಯ ಶಿಲ್ಪಗಳ ಶೇಷ-ಅವಶೇಷ-ಉಲ್ಲೇಖಗಳೇ ಸಾಕ್ಷಿಗಳಾಗಿವೆ.

ಶಿಲ್ಪಕಲೆಗೆ ಸಂಬಂಧಿಸಿದ ವಿಚಾರದಲ್ಲಿ ಕ್ರಿ.ಪೂ.ದಿಂದ ಕ್ರಿ.ಶ.ದವರೆಗೆ ಬುದ್ಧ, ಮಹಾವೀರ ನಂತರದ ಇತಿಹಾಸದಲ್ಲಿ ಆದ ಬದಲಾವಣೆಗಳಲ್ಲಿ ಬೆಳೆದುಬಂದ ಶಿಲ್ಪಶೈಲಿಗಳಲ್ಲಿ ಸಾಕಷ್ಟು ಪರಿವರ್ತನೆಗಳು ಕಂಡು ಬಂದಿದೆ.

ಭರತ ಖಂಡವನ್ನು ಆಳಿದ ದೇಶಿ-ವಿದೇಶಿಯರ ವಿವಿಧ ಆಳ್ವಿಕೆಗಳಲ್ಲಿ ಹಲವಾರು ವೈವಿಧ್ಯತೆಗಳು ಮೂಡಿ ಬರುವುದಕ್ಕೆ ಕಾರಣೀ ಭೂತವಾಗಿವೆ ಎಂದರೆ ತಪ್ಪಾಗಲಾರದು. ಇವೆಲ್ಲವುಗಳ ಪರಿಣಾಮದಿಂದ ಆದಂತಹ ಬದಲಾವಣೆಗಳಿಗಿಂತ ಬ್ರಿಟೀಷರ ಆಳ್ವಿಕೆಯ ನಂತರ ಆದ ಬದಲಾವಣೆಗಳು ಭಾರತೀಯ ಸಾಂಸ್ಕೃತಿಕ ದಿಕ್ಕನ್ನು ಪಲ್ಲಟಗೊಳಿಸಿತು.

ನಮ್ಮ ದೇಶವನ್ನು ಬ್ರಿಟಿಷರು ಆಳುತ್ತಿದ್ದರಿಂದ ಅವರ ಪ್ರಭಾವ ಎಲ್ಲಾ ಕ್ಷೇತ್ರಗಳಲ್ಲೂ ಆಗಿದೆ. ಅವರು ಭಾರತಕ್ಕೆ ವ್ಯಾಪಾರಕ್ಕಾಗಿ ಬಂದವರು ಕ್ರಮೇಣ ಇಲ್ಲಿ ನೆರೆಯೂರಿದರು.

ಇದರಿಂದ ಅವರ ಸಂಸ್ಕೃತಿಯು ಎಲ್ಲಾ ಕಡೆ ಪ್ರಚಾರಕ್ಕೆ ಬಂದಿತು. ಕಲೆಯಲ್ಲೂ ಸಹ ಬ್ರಿಟಿಷ್ ಶಿಕ್ಷಣ ಪದ್ಧತಿ ಜಾರಿಗೆ ಬಂದಿತು. ಈ ರೀತಿಯ ಬ್ರಿಟೀಷರ ಶೈಲಿಯ ಕಲಾ ಶಿಕ್ಷಣವು ಕಂಪನಿ ಆರ್ಟ್ ಅಂತಲೂ ಪ್ರಸಿದ್ಧಿಗೆ ಬಂದಿತ್ತು. ಭಾರತದಲ್ಲಿ ಶಿಲ್ಪಕಲೆ ಒಂದು ಸಾಂಪ್ರಾದಾಯಿಕ ನೆಲೆಗಟ್ಟಿನ ಮೇಲೆ ಮತ್ತು ದೇವರು, ದೇವಾಲಯಗಳಿಂದಲೇ ಮುಖ್ಯವಾದವು. ಇಂತಹ ಪರಿವರ್ತನೆಯ ವಾತಾವರಣದಲ್ಲಿ ಬ್ರಿಟಿಷರ ಆಗಮನದಿಂದ ಶಿಲ್ಪಕಲೆಯಲ್ಲೂ ಬದಲಾವಣೆಯಾಯಿತು. ಆಧುನಿಕ ಭಾರತದ ಶಿಲ್ಪಿಗಳು ಹೊಸ ಚಿಂತನೆಯ ಕಡೆ ಗಮನ ಹರಿಸಿ, ತಮ್ಮಲ್ಲಿರುವ ಅಭಿವ್ಯಕ್ತಿತನವನ್ನು ವ್ಯಕ್ತಪಡಿಸಿದರು.

ಸ್ವಯಂ ಅಭಿವ್ಯಕ್ತತೆಯನ್ನು ಸಮಕಾಲೀನ ಕಲಾವಿದರು ರೂಢಿಸಿಕೊಳ್ಳ ತೊಡಗುತ್ತಿದ್ದಂತೆ ಬ್ರಿಟಿಷ್ ಕಂಪನಿ ಶೈಲಿಗಳಲ್ಲಿಂದಲೂ ಹೊರ ಬಂದು ಮತ್ತೊಂದಷ್ಟು ನವ್ಯತೆಯನ್ನು ಭಾರತೀಯ ಪರಂಪರೆಗೆ ಅನುಸಾರವಾಗಿ ವ್ಯಕ್ತಪಡಿಸಿದರು.

ಭಾರತದ ಸಮಕಾಲೀನ ಶಿಲ್ಪಕಲಾವಿದರು ಕುಲುಮೆ, ಬೆಸುಗೆ, ಎರಕ, ಮಾದರಿ ರಚನೆ, ಕಲ್ಲು ಮತ್ತು ಮರ ಕೆತ್ತನೆಯ ಸಾಧನಗಳೊಂದಿಗೆ ಪರಮಾಣು ನಿಯಂತ್ರಣ ಮತ್ತು ಪ್ರೇರಣೆ, ಬೆಸೆಯುವಿಕೆ ಹಾಗೂ ತಾಂತ್ರಿಕ ವಿಧಾನಗಳನ್ನು ಬಳಸುತ್ತಿದ್ದಾರೆ. ಅಲ್ಲದೆ ಹೊಸ ಸಾಮಾಗ್ರಿಗಳು ಮತ್ತು ತಂತ್ರಗಳು, ಹೊಸ ಅನುಭವಗಳು ಹಾಗೂ ಇಂದ್ರಿಯ ಸೂಕ್ಷ್ಮವು ಜಾಗೃತಗೊಂಡಿದ್ದು, ಕಲಾತ್ಮಕ ಅಭಿವ್ಯಕ್ತಿಯಲ್ಲಿ ಮುನ್ನೆಡೆದಿದೆ. ತಾಂತ್ರಿಕತೆ, ಕಲಾತ್ಮಕ ಕೌಶಲ್ಯ ಮತ್ತು ಪ್ರತಿಭೆಯ ಶ್ರೀಮಂತಿಕೆ ಇಂದು ಸಮಕಾಲೀನ ಕಲಾವಿದರ ಎಲ್ಲಾ ಚಟುವಟಿಕೆಗಳನ್ನು ಬೆಳಸುತ್ತದೆ ಹಾಗೂ ಅದರ ಕಾರ್ಯ ಸಾಮಾಗ್ರಿಯ ಅನ್ವಯ ಪೂರ್ಣ ಭೌತಿಕ ಪ್ರಪಂಚವನ್ನು ಬೆಳಸಿದೆ. ವಿಭಿನ್ನ ಕಲೆಗಳ ಸಂಬಂಧ ಮತ್ತು ತಂತ್ರಗಳೆರಡು ಈಗ ಪರಸ್ಪರ ನಿಕಟವಾಗುತ್ತಿವೆ. ಆದುದರಿಂದ ನಮ್ಮ ಹಲವು ಹಿರಿಯ ಹಾಗೂ ಯುವ ಶಿಲ್ಪಕಲಾವಿದರ ಇತ್ತೀಚಿನ ಪ್ರಯೋಗಗಳಲ್ಲಿ ಅಭಿವ್ಯಕ್ತಿಯ ವಿಶಾಲತೆಯನ್ನು ಕಾಣಬಹುದು. ಸಂಯೋಜನೆಯ ಜೀವಂತ ಗುಣ, ಒಬ್ಬ ಕಲಾವಿದ ಇತರೆ ಕೆಲಸಗಳ ವಿಶಿಷ್ಟ ಮಾಧ್ಯಮದಿಂದಾಗಿ ತನ್ನ ಕೆಲಸ, ಹಲವು ಅನುಭವಗಳು ಮತ್ತು ಇಂದ್ರೀಯ ಸೂಕ್ಷ್ಮಗಳ ವ್ಯಾಪಕತೆಯನ್ನು ಪ್ರತಿಬಿಂಬಿಸುತ್ತಿವೆ.

ಭಾರತದ ಕೆಲವು ಶಿಲ್ಪ ಕಲಾವಿದರು ಮಾತ್ರ ಈ ಬದಲಾದ ಸಂದರ್ಭಗಳಲ್ಲಿ ಸ್ಥಿರವಾದ ಅಭಿಪ್ರಾಯಗಳ ಕೃತಿಗಳನ್ನು ರಚನೆ ಮಾಡಿದ್ದಾರೆ. 1940 ರಿಂದ ಭಾರತದ ಸಮಕಾಲೀನ ಶಿಲ್ಪದಲ್ಲಿ ಆದ ಬದಲಾವಣೆಯು ತುಂಬಾ ಗಮನಾರ್ಹವಾದದು. ಹೊಸ ಬದಲಾವಣೆ, ರೂಪ, ಕಾರ್ಯವಿಧಾನ ಅಥವಾ ಪರಿಕಲ್ಪನೆಯು ವಿಶಾಲವಾಗಿ, ವ್ಯಕ್ತಿಗತವಾಗಿ ಶಿಲ್ಪಕಾರರ ರಚನಾತ್ಮಕ ವ್ಯಕ್ತಿತ್ವದ ಮೇಲೆ ಪಾಶ್ಚಿಮಾತ್ಯದ ಸಮಕಾಲೀನ ಪ್ರಭಾವ ಶೈಲಿಯು ಪರಿಣಾಮ ಬೀರಿತು.

ಈ ಸಂದರ್ಭದಲ್ಲಿ ಉತ್ತರ ಭಾರತದ ಪಶ್ಚಿಮ ಬಂಗಾಳದಲ್ಲಿ ಆದಾಗಲೇ ಸ್ವದೇಶಿ, ಸ್ವಾತಂತ್ರ್ಯ, ದೇಶಾಭಿಮಾನದ ಕಲಾ ಚಳುವಳಿಗಳು ಬಹಳಷ್ಟು ಪರಿಣಾಮ ಬೀರಿದ್ದರಿಂದ ಮಧ್ಯ ಭಾರತದಲ್ಲಿ ಇದರ ಪ್ರಭಾವ ಬೀರುವಷ್ಟರಲ್ಲಿ ಸತಾರ ಜಿಲ್ಲೆಯಲ್ಲಿನ ಔಂದ್ ಸಂಸ್ಥಾನದಲ್ಲಿ ಸುವರ್ಣ ಕಲೆಯೇ ಮೆರೆಯಿತು ಎನ್ನಬಹುದಾಗಿದೆ.

## ಔಂದ್ ಸಂಸ್ಥಾನದ ರಾಜಾಶ್ರಯ

### ಔಂದ್ ಸಂಸ್ಥಾನದ ಹಿನ್ನಲೆ

ಔಂದ್ ಸಂಸ್ಥಾನದ ಮೂಲದೇವತೆ ಮೂಲ್‌ಪೀಠ್ ದೇವತೆ ಈ ಹೆಸರು ಮುಳ್ಳುಪೀಠ ಅಂದರೆ ಮುಳ್ಳಿನ ಬೆಟ್ಟದ ಮೇಲೆ ಪೀಠವನ್ನು ಅಲಂಕರಿಸಿದ ದೇವತೆಯಾಗಿದ್ದರಿಂದ ಮೂಲ್‌ಪೀಠ ದೇವತೆ ಎಂತಲೂ, ಅಲ್ಲಿನ ರಕ್ಕಸರಿಂದ ಬೇಸತ್ತ ಜನರು 'ಹೇಮಾಯಿ' (ಹೇತಾಯಿ) ಎಂದು ಕರೆದಾಗ, ಬಂದ ಹೇಮಾಯಿಯು ರಕ್ಕಸರನ್ನು ಸಂಹರಿಸಿ, ಯಮಾಯಿ ದೇವತೆಯಾಗಿ, ಮುಖಳಾಯಿ, ಭವಾನಿ ದೇವತೆಯಾಗಿದ್ದಾಳೆ. ಈ ರೀತಿಯಾ ದೇವತೆಗಳು, ಔಂದ್‌ನ ಧಾರ್ಮಿಕ ಪರಂಪರೆಯನ್ನು ಉಳಿಸಲಿಕ್ಕೆ ಕಾರಣ ಎಂಬ ನಂಬಿಕೆಯಿಂದ ಇದು ಒಂದು ಧಾರ್ಮಿಕ ಕ್ಷೇತ್ರವಾಗಿಯೂ ಕೂಡ ಪ್ರಸಿದ್ಧಿಯನ್ನು ಪಡೆದಿದೆ. ಈ ರೀತಿಯ ಪರಿಸರದಲ್ಲಿ ರಾಜನೂ ಹಾಗೂ ಈತನ ಪೂರ್ವಿಕರು ಬಂದೀಖಾನೆಗಳಲ್ಲಿದ್ದ ಸಾದಾ ಶಿಕ್ಷೆಯ ಆಪರಾಧಿಗಳಿಗೆ ಕೃಷಿ, ಹೈನುಗಾರಿಕೆ, ಸಾಂಸ್ಕೃತಿಕ ಕೆಲಸಗಳಲ್ಲಿ ಆಸಕ್ತಿಯಿಂದ ಭಾಗವಹಿಸಲು ಅವಕಾಶ ನೀಡುತ್ತಿದ್ದರೆಂಬುದು ಕೂಡ ಜನ ಮೆಚ್ಚುಗೆಯಾಗಿತ್ತು.

1940ರ ದಶಕದಲ್ಲಿ ಔಂದ್ ಸಂಸ್ಥಾನವು ರಾಜಾ ಬಾಳ ಸಾಹೇಬ ಪಂತ ಪ್ರತಿನಿಧಿಯೆಂಬ ಕಲಾ ಆರಾಧಕನೂ, ಸ್ವತಃ ಕಲಾವಿದನಾದವನನ್ನೂ ಪಡೆದಿತ್ತು. ಈ ಕಾಲದಲ್ಲಿ ಕರ್ನಾಟಕ ಕಲಾವಿದರಾದ ಚಿತ್ರಕಾರ ಬಿ.ಆರ್. ಕೋಟ್ಯಾಳಕರ ಹಾಗೂ ಶಿಲ್ಪಿ ವೀರಪ್ಪ ಎಲ್ಲಪ್ಪ ಕೊಟ್ಯಾಳಕರ ಉರುಫ್ (ಈರಪ್ಪ) ವೀರಪ್ಪ ಕುಂಬಾರರ ಕಲಾ ಪ್ರಾವೀಣ್ಯತೆಯು ಸಾಕಾರ ರೂಪವನ್ನು ಪಡೆಯಿತು.

ಶಿಲ್ಪಿ ವೀರಪ್ಪ ಎಲ್ಲಪ್ಪ ಕೋಟ್ಯಾಳಕರ, ವೃತ್ತಿಯಿಂದ, ಮನೆತನದಿಂದ ಕುಂಬಾರಿಕೆಯನ್ನು ಮಾಡುತ್ತಾ ಸಾಗಿ ಬಂದವರಾಗಿದ್ದರಿಂದ ಕುಂಬಾರ ಎಂಬ ಹೆಸರು ಹುಟ್ಟೂರಲ್ಲಿ ಬಳಕೆಯಲ್ಲಿತ್ತು. ಬದುಕಿನ ಬಡತನದ ಬವಣೆಯನ್ನು ನೀಗಿಸಲು ಶಿಲ್ಪ ಸೃಷ್ಟಿಯಲ್ಲಿ ತಮ್ಮನ್ನು ಅರ್ಪಿಸಿಕೊಂಡವರು. ಸಾಂಸ್ಕೃತಿಕ ಶಿಲ್ಪ ಸಂಕುಲದ ಪರಂಪರೆಯನ್ನು ಸದಾ ಹಸಿರಾಗಿರುವಂತೆ ಜತನವಾಗಿಡಲು ಸ್ಫೂರ್ತಿಯ ಮಾರ್ಗವನ್ನು ಅನುಸರಿಸಿದ ಅಪರೂಪದ ಶಿಲ್ಪಕಲಾವಿದರು.

"ಜಡ, ಅಚೇತನ ಎಂಬ ಮಾತುಗಳು ಅಸ್ತಿತ್ವದ ಮಿತಿಗೆ ಸಂಬಂಧಿಸಿದ್ದು ಇದಕ್ಕೆ ವಿರುದ್ಧವಾಗಿ ಜೀವ ಎಂಬುದು ಸೃಷ್ಟಾತ್ಮಕ. ಏಕೆಂದರೆ ಅದು ತನ್ನೊಳಗೆ ಕಾಲದೇಶಗಳ ಮಿತಿಗಳನ್ನು ಲೆಕ್ಕಿಸದೆ ನಿರಂತರ ಹರಿಯ ಬಯಸುವ ಸಮೃದ್ಧಿಯೊಂದನ್ನು ತುಂಬಿಕೊಂಡಿದೆ. ಇದು ಅವಿರತವಾಗಿ ತನ್ನನ್ನು ತಾನು ಅಭಿವ್ಯಕ್ತಿಸುವ ಸಾಹಸದ ಬೆನ್ನು ಹತ್ತಿರುತ್ತದೆ. ನಮ್ಮ ಈ ದೇಹದೊಳಗೆ ಇದನ್ನು ಸಮರ್ಥವಾಗಿ ನಿರ್ವಹಿಸಬಲ್ಲ ಅಂಗಾಂಗಳು ಇವೆ. ಆದರೆ, ದೇಹವೆಂಬುದು ಹೊಟ್ಟೆ, ಹೃದಯ, ಶ್ವಾಸಕೋಶ ಅಥವಾ ಮೆದುಳುಗಳನ್ನು ವ್ಯವಸ್ಥಿತವಾಗಿ ತುಂಬಿಕೊಳ್ಳಬಲ್ಲ ಚೀಲ ಮಾತ್ರ ಅಷ್ಟೆ ಅಲ್ಲ, ತನ್ನ ವ್ಯಕ್ತಿತ್ವವನ್ನು ಸಂವಹನಗೊಳಿಸಬಲ್ಲ ಸಾಮರ್ಥ್ಯವೇ ಅದರ ಪರಮ ಮೌಲ್ಯ. ಇದರ ಪ್ರತೀಕವೇ ದೇಹ. ಇದಕ್ಕೆ ತನ್ನದೇ ಆದ ಬಣ್ಣ, ಆಕಾರ ಹಾಗೂ ಚಲನೆ ಉಂಟು. ಇದೆಲ್ಲ ಬಹುತೇಕ ಮೇಲ್ನೋಟಕ್ಕೆ ಮಾತ್ರ. ಇವು ಸ್ವಂತ ಅಭಿವ್ಯಕ್ತಿಯ ಅವಶ್ಯಕತೆಗಳಿಗೆ ಹೊರತು ತನ್ನ ತನವನ್ನು ಕಾಯ್ದುಕೊಳ್ಳಬಲ್ಲ ಅವಶ್ಯಕತೆಗಳಲ್ಲ" ಎಂಬ ಈ ಜೀವನ ಸತ್ಯವನ್ನು ಅರಿತೋ ಅರಿಯದೆಯೋ ಶಿಲ್ಪಿ ವೀರಪ್ಪ ಕುಂಬಾರರು, ತಮ್ಮ ಜೀವಮಾನವನ್ನು ಕಲಾ ಸೃಷ್ಟಿಯಲ್ಲಿ ತೊಡಗಿಸಿಕೊಳ್ಳಲು ನಿರ್ಧರಿಸಿ ಮುಂದುವರೆದರು. ಇವರ ಧೃಡ ಸಂಕಲ್ಪವನ್ನು ಬಹಳ ಬೇಗನೆ ಅರಿತುಕೊಂಡ ರಾಜಾ ಬಾಳ ಸಾಹೇಬರು ಇವರ ಕಲಾ ವಂತಿಕೆಗೆ ಮೆರಗನ್ನು ಪಡೆಯಲೆಂದೇ ಖ್ಯಾತ ಶಿಲ್ಪಿ ಮಾದವರಾಯ ಪಾತ್ರೋಟ ಮಾರ್ಗದರ್ಶನವನ್ನು ಒದಗಿಸಿ ಔಂದ್ ಸಂಸ್ಥಾನವು ಚಿತ್ರ ಶಿಲ್ಪ ಸಂಕುಲದ ತಾಣವಾಗಿ ಪಸರಿಸುವಂತೆ ಮಾಡಿದರು.

ಶಿಲ್ಪಿ ವೀರಪ್ಪ ಕುಂಬಾರರು ತನ್ನ ಮಾವ ಬಿ.ಆರ್. ಕೋಟ್ಯಾಳಕರರ ಚಿತ್ರಕೃತಿಗಳ ರಚನೆಗೆ ಸಹಾಯಕ್ಕಾಗಿ ಬಂದರಾದರು. ತಾನೊಂದು ಬಗೆದರೆ ದೈವ ಒಂದು ಬಗೆಯಿತು ಅಂದಂತೆ, ಬಿಡುವಿನ ವೇಳೆಯಲ್ಲಿ ತಾನು ರಚಿಸಿದ ಕಿರು ಶಿಲ್ಪಗಳಲ್ಲಿನ ಕಲೆಯನ್ನು ಗಮನಿಸಿ ರಾಜಾ ನೀಡಿದ ಅವಕಾಶವನ್ನು ಸ್ಫೂರ್ತಿಯನ್ನಾಗಿ ಸ್ವೀಕರಿಸಿ ಪ್ರಬುದ್ಧ, ಪರಿಪೂರ್ಣ ಶಿಲ್ಪಗಳನ್ನು ರಚಿಸಿ, ತನ್ನ ಮಾವನಿಗೂ ಸಲ್ಲುವ ಮರ್ಯಾದೆಯನ್ನೂ ತನಗೂ ವಿಸ್ತರಿಸಿಕೊಂಡರು.

1940ರ ದಶಕದಲ್ಲಿ ಮಹಾರಾಷ್ಟ್ರದ ಸಾತಾರ ಜಿಲ್ಲೆಯ ಔಂದರಾಜಾ ಬಾಳಾ ಸಾಹೇಬ ಪಂತ ಪ್ರತಿನಿಧಿಗೆ ವಿಜಾಪುರ ಜಿಲ್ಲೆಯ 16 ಹಳ್ಳಿಗಳು ಅವರ ಆಧೀನದಲ್ಲಿದ್ದವು. ಅದರಲ್ಲಿ ಮಾವನ ಊರಾದ ಕೋಟ್ಯಾಳ ಕೂಡ ಒಂದಾಗಿತ್ತು. ಈ ಇಬ್ಬರೂ ಕಲಾವಿದರು ತಮ್ಮ ಸಂಸ್ಥಾನಕ್ಕೆ ಒಳಪಟ್ಟವರಾದ್ದರಿಂದ ರಾಜನಿಗೆ ಎಲ್ಲಿಲ್ಲದ ಅಭಿಮಾನ ಗೌರವ ಮೂಡಿತ್ತು. ಇದಕ್ಕೆ ಕಾರಣ ಸ್ವತಃ ರಾಜನೇ ಅಪ್ರತಿಮ ಚಿತ್ರಕಲಾವಿದರಾಗಿದ್ದದ್ದು. ಅವರ ಆಸ್ಥಾನದಲ್ಲಿ ಕಲಾವಿದರಿಗೆ ಎಲ್ಲಿಲ್ಲದ ಗೌರವ, ಮನ್ನಣೆ, ಹೀಗಾಗಿ

ಲಲಿತಕಲೆಗಳೆಲ್ಲಾ ಉಚ್ಚ್ರಾಯ ಸ್ಥಿತಿಗೆ ಮುಟ್ಟಿದ್ದವು. ಇದಕ್ಕೆ ಸಾಕ್ಷಿ ಎಂದರೆ ಔಂಧ್‌ನ 'ಶ್ರೀ ಭವಾನಿ ಚಿತ್ರ ಸಂಗ್ರಹಾಲಯ' ಅಂದಿನ ವೈಭವದ ಅರಿವು ಇಂದಿಗೂ ಮೂಡಿಸುತ್ತದೆ.

ಮಾಸಿಕ 80 ರೂಪಾಯಿಗಳ ಸಂಬಳದ ಜೊತೆಗೆ ಇತರೆ ಎಲ್ಲ ಸೌಲಭ್ಯಗಳನ್ನು ಒದಗಿಸಿ, ತನ್ನ ರಾಜವಾಡೆಯಲ್ಲೇ ಕಲಾವಿದರಿಗೆ ಉಳಿಯಲು ಅವಕಾಶ ಮಾಡಿಕೊಟ್ಟರು. ರಾಜ ತಾನೂ ನೂರಾರು ಕೃತಿಗಳನ್ನು ರಚಿಸುವುದರ ಜೊತೆಗೆ ಆಶ್ರಯಿಸಿದ ಕಲಾವಿದರಿಂದಲೂ ನೂರಾರು ಕೃತಿಗಳು ಮೂಡಿ ಬರುವಂತೆ ಮಾಡಿದ್ದರು. ಮಾರ್ಬಲ್ ಕಲೆಯಲ್ಲಿ ಮಾದೇವರಾವ್ ಪಾತ್ರೋಟರು ವೀರಪ್ಪನಿಗೆ ಮಾರ್ಗ– ದರ್ಶಕರಾಗಿ, ಗುರುವಾಗಿ ವಿದ್ಯೆ ಕಲಿಸಿದರೆ, ಚಿತ್ರಕಲೆಯಲ್ಲಿ ಮಾವ ಭರಮಪ್ಪ ಈತನಿಗೆ ಗುರುವಾಗಿದ್ದರು. ಈ ರೀತಿಯಾಗಿ ಎರಡೂ ಕಲೆಗಳ ಸಾಧನೆಯಲ್ಲಿ ತೊಡಗಿದಾಗ, ಪ್ರಾರಂಭದಲ್ಲಿ ಮಾವ–ಬಾಮೈದುನರಿಂದ ಉತ್ತಮ ಕಲಾಕೃತಿಗಳು ಮೂಡಿ ಬಂದು, ಅವುಗಳನ್ನು ರೂ. 6000 ರಿಂದ 10,000 ದವರೆಗೆ ರಾಜ ಮಾರಾಟ ಮಾಡಿ, ಅಂದು ವಿಶೇಷ ಸಮಾರಂಭ ಏರ್ಪಡಿಸಿ ಬೆಳ್ಳಿಕಡ್ಡಿರುಮಾಲು ಸುತ್ತಿ, ಬೆಳ್ಳಿ, ಬಂಗಾರದ ಪದಕಗಳನ್ನು ಕೊರಳಲ್ಲಿ ಹಾಕಿ, ಬೆಳ್ಳಿ ಕೈಗಡಗ ಶಿಲ್ಪಿ ಕೈಗೆ ತೊಡಿಸಿ, ಸನ್ಮಾನಿಸಿ ಮಾವ ಬಿ.ಆರ್. ಕೊಟ್ಯಾಳ್ಕರ ಅವರೊಂದಿಗೆ ಅರಮನೆಯಲ್ಲಿ ಬೆಳ್ಳಿ ತಾಟಿನಲ್ಲಿ ಊಟಮಾಡಿಸಿ, ಬಂಗಾರದ ವಾಟೆಯಲ್ಲಿ ಹಾಲು ಕುಡಿಸಿ ರಾಜ ಕಳುಹಿಸಿದ್ದನ್ನು ಈ ಕಲಾವಿದ ಕೊನೆ ದಿನಗಳಲ್ಲೂ ನೆನಪಿಸಿಕೊಳ್ಳುತ್ತಿದ್ದರು.

ಮುಂಜಾನೆ ನಾಲ್ಕುಗಂಟೆಗೆ ಎದ್ದು ಯಮಾಯಿ ದೇವಾಲಯದ 432 ಮೆಟ್ಟಿಲುಗಳನ್ನು ಕೊಡ ನೀರಿನ ಸಮೇತ ಏರಿ, ದೇವಿಗೆ ಜಲವನ್ನು ಅರ್ಪಿಸಿ ರಾಜ ಬರುವುದಕ್ಕೆ ಮುಂಚೆ ಮಂಗಳಾರತಿಗೆ "ಕಾಯ್ದು ಅವರ ಜೊತೆಯಲ್ಲಿಯೇ ವೀರಪ್ಪನವರು ಇಳಿದು ಬರುತ್ತಿದ್ದರು. ಆ ಸಂದರ್ಭದಲ್ಲಿ ರಾಜ–ರಾಣಿಯರು ಮೆಟ್ಟಿಲುಗಳ ಅಕ್ಕಪಕ್ಕದಲ್ಲಿ ಕೆಲವು ಮೂರ್ತಿಗಳನ್ನು ಅಪೇಕ್ಷಿಸಿದಾಗ, ವೀರಪ್ಪ ಕುಂಬಾರರು ಸಹ ಶಿಲ್ಪಿಗಳ ಜೊತೆಯಲ್ಲಿ ಸೇರಿ, ನಾರದ, ಹಯಗ್ರೀವ, ಜಯ, ವಿಜಯ, ಹುಲಿ, ಸಿಂಹ, ಚಿರತೆ, ಆನೆ ಮೂರ್ತಿಗಳನ್ನು ಮಾರ್ಬಲಿನಲ್ಲಿ ನಿರ್ಮಿಸಿಕೊಟ್ಟಿರುವ ಶಿಲ್ಪಗಳು ಇಂದಿಗೂ ಜೀವಕಳೆಯನ್ನು ನೀಡಿವೆ.

ಭಾರತೀಯ ಶಿಲ್ಪಕಲಾ ಪರಂಪರೆಯಲ್ಲಿ ನವ್ಯತೆ ಪ್ರಾರಂಭವಾದದ್ದು, ಬ್ರಿಟಿಷರ ಆಗಮನದ ನಂತರ, ಅಲ್ಲಿಯವರೆಗೆ ನಮ್ಮ ಶ್ರೀಮಂತ ಪರಂಪರೆಯ ಶಿಲ್ಪ ಮತ್ತು ಚಿತ್ರದಲ್ಲಿ ಕಂಡುಬರುವ ಪ್ರಮುಖ ಲಕ್ಷಣವಾದ ಕಥಾನಕರೂಪ, ಪಾರಮಾರ್ಥಿಕ ಅಂಶ, ಪರಿಸರದ ಕಲ್ಪನೆ, ಸಂತೋಷವನ್ನುಂಟು ಮಾಡುವ ಗುಣ, ಒಟ್ಟಿನಲ್ಲಿ

ಮನಸ್ಸನ್ನು ನೈತಿಕ ನೆಲೆಗಟ್ಟಿನ ಮೇಲೆ ಆನಂದದ ಪೂರ್ಣಸ್ಥಿತಿಗೆ ಒಯ್ಯುವ ಗುಣಲಕ್ಷಣಗಳನ್ನು ಹೊಂದಿದ್ದವು. ಈ ವಿಚಾರ ವೀರಪ್ಪನಿಗೆ ಹೊಟ್ಟೆಪಾಡಿಗಾಗಿ ಸೊಲ್ಲಾಪುರಕ್ಕೆ ಬಂದು ಅಲ್ಲಿಂದ ಔಂದ್‌ಗೆ ಪಯಣಿಸಿದಾಗ ಹಂತ ಹಂತವಾಗಿ ಅರ್ಥವಾಯಿತು. ಔಂದ್‌ಗೆ ಪಯಣಿಸಿದ ಸಂದರ್ಭ ವಿಚಿತ್ರವೇ ಸರಿ.

'ಸೊಲ್ಲಾಪುರದ ಲಕ್ಷ್ಮೀ ದೇವಾಲಯದ ಬಳಿ ಮಾವ ಕೊಟ್ಯಾಳ್ಕರ್ ಜೊತೆಗೂಡಿ ಚಲನಚಿತ್ರ ಹಾಗೂ ರಂಗಭೂಮಿ ಪ್ರದರ್ಶನಗಳ ಪೋಸ್ಟರ್‌ಗಳನ್ನ ರಚನೆ ಮಾಡುತ್ತಿದ್ದಾಗ, ಇವರ ಕಲಾಪ್ರೌಢಿಮೆ ಕಂಡ ಒಬ್ಬ ಛಾಯಾಚಿತ್ರಕಾರನು, ಇವರನ್ನು ತನ್ನ ಅಧೀನಕ್ಕೆ ತೆಗೆದುಕೊಂಡು, ಇವರಿಂದ ಕಲಾಕೃತಿಗಳನ್ನ ರಚನೆ ಮಾಡಿಸಿ, ಆತ ತನ್ನ ಹೆಸರನ್ನು ಕಲಾಕೃತಿಗಳಲ್ಲಿ ಹಾಕಿಕೊಂಡು, ತನ್ನ ರಚನೆಗಳೆಂದು ಮಾರಾಟಮಾಡಿಕೊಂಡು ಹಣವನ್ನು ಗಳಿಸಿ, ಇವರಿಗೆ ತುಂಬಾ ಕಡಿಮೆ ಹಣವನ್ನು ನೀಡುತ್ತಿದ್ದಂತಹ ಮೋಸದ ಜಾಲದಿಂದ ಬಿಡಿಸಿಕೊಳ್ಳಲು ಒಂದು ರೀತಿ ಔಂದ್ ಮಹಾರಾಜರೇ ಕಾರಣರಾಗುತ್ತಾರೆ. ಅವರೊಂದಿಗೆ ಕಲಾವಿದರು ಸಂಸ್ಥಾನಕ್ಕೆ ಹೋಗಿ ಅಲ್ಲೇ ನೆಲೆಸಿದುದು ಒಂದು ಪವಾಡವೇ ಆಗಿದೆ'.

ಇತಿಹಾಸ ಪೂರ್ವ ಕಾಲದ ಶಿಲ್ಪಗಳ ಸೃಷ್ಟಿಯ ಹಿಂದಿನ ಹಾಗೂ ಆನಂತರದ ಹಾಗೂ ಇಂದಿನ ಸಮಕಾಲೀನ ಕಲಾ ಸೃಷ್ಟಿಯ ಆಶಯಗಳು ಒಂದೇ ಆಗಿಲ್ಲ. ಹಾಗಾಗುವುದು ಸಾಧ್ಯವೇ ಇಲ್ಲ. ವಿವಿಧ ಸಂದರ್ಭಗಳು, ವೈವಿಧ್ಯಮಯವಾದ ಕಲಾವಿದರು, ಅವರ ಬದುಕು ವೈವಿಧ್ಯಮಯವಾದ ಚಿತ್ರ, ಶಿಲ್ಪ ಇತ್ಯಾದಿಗಳು ನೋಡುವುದು ಅನುಭವಿಸುವುದು ಸಾಧ್ಯವಾಗಿದೆ. ಅಂತೆಯೇ. ಶಿಲ್ಪಿ ಶ್ರೀ ವೀರಪ್ಪ ಕುಂಬಾರ ಕೋಟ್ಯಾಳಕರ ಇವರ ಆಶಯಗಳು, ಸಂದರ್ಭಗಳು, ಉದ್ದೇಶಗಳು ಆ ಕಾಲದ ಮೌಲ್ಯವನ್ನು ಕಲಾಕೃತಿಗಳಲ್ಲಿ ಎತ್ತಿಹಿಡಿದಿರುವುದನ್ನು ಕಾಣಬಹುದು.

ಯಾವುದೇ ಕಲೆ ಕಲಾವಿದನ ವ್ಯಕ್ತಿತ್ವದ ಪ್ರಕಟಣೆಯಾಗುವುದು ಮುಖ್ಯ. ತಂತ್ರ ಯಾವುದಾದರೇನು? ಪೂರ್ವದೇಶಗಳ ಕಲೆಯ ಗುಣಾಂಶಗಳನ್ನೇ ಹೀರಿಕೊಂಡು ಪಶ್ಚಿಮದ ಕಲಾ ಪ್ರಪಂಚದಲ್ಲಿ ಸರ್ವಮಾನ್ಯವು ಸರ್ವೆ ಸಾಮಾನ್ಯರಿಗೆ ಹಿಡಿಸುವ ಹಾಗೆ ಕೌಶಲ್ಯ ಹಾಗೂ ವೈಚಾರಿಕ ನಿಖರತೆ ಇವೆರಡನ್ನೂ ಸಮನ್ವಯಗೊಳಿಸಿ ಅವಿರ್ಭವಿಸುವ ಕಲೆ ಮೂಲವಾದ ಭಾರತೀಯ ಕಲಾವಿದನ ಸಿದ್ಧಿ ಎನಿಸುವುದು. ಕುಂಬಾರವರು ಪಾಶ್ಚಾತ್ಯ ಪದ್ಧತಿಯಲ್ಲಿ ಶ್ರೀ ಮಾದೇವರಾವ್ ಪಾತ್ರೋಟರ ಬಳಿ ಕಲಾಭ್ಯಾಸ ಮಾಡಿದರೂ, ತಮ್ಮ ಕಲಾಕೃತಿಗಲ್ಲಿ ದೇಶಿಯತೆಯ ಸೊಗಡನ್ನು ಅಭಿವ್ಯಕ್ತಿಸಿದ ರೀತಿ ಅನುಪಮವಾಗಿದೆ. ಸಂವೇದನೆಯ ನೆರಳು ಬದುಕಿನ ವೈವಿಧ್ಯಮಯ ಪ್ರಭಾವದಿಂದ ಆದ ಬದಲಾವಣೆ, ಒಬ್ಬನೇ ಕಲಾವಿದ ತನ್ನ ಬದುಕಿನ ವಿವಿಧ ಘಟ್ಟಗಳಲ್ಲಿ ವಿಭಿನ್ನ ಸಂವೇದನೆಗಳಿಗೆ ಒಳಗಾಗಿ ವೈವಿಧ್ಯಮಯವಾದ

ಕಲಾತ್ಮಕಸೃಷ್ಠಿ ಕುಂಬಾರರವರ ಕಲಾಕೃತಿಗಳಲ್ಲಿ ಕಾಣುತ್ತೇವೆ. ಕುಂಬಾರವರು ತಮ್ಮ ಈ 101 ವರ್ಷಗಳ ಜೀವನಾವಧಿಯಲ್ಲಿ ಚಿತ್ರ-ಶಿಲ್ಪಗಳ ರಚನೆಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡವರು, ಸಾವಿರಾರು ಚಿತ್ರ ಶಿಲ್ಪಗಳನ್ನು ರಚಿಸಿದ್ದಾರೆ. ಈ ಕಲಾಕೃತಿಗಳು ಅವರ ಕಲಾಸಾಧನೆಯ ಪ್ರತೀಕಗಳಾಗಿವೆ.

## ರೇಖಾ ವಿನ್ಯಾಸ

ಕುಂಬಾರವರ ರೇಖಾ ವಿನ್ಯಾಸ ಅವರದೇ ಆದ ವಿಶಿಷ್ಟತೆಯಿಂದ ಕೂಡಿದ್ದಾಗಿದೆ. ಭಾವಚಿತ್ರಗಳಲ್ಲಾಗಲಿ, ಸಂಯೋಜನಾ ಚಿತ್ರಗಳಲ್ಲಿಯೇ ಆಗಲಿ, ರೇಖೆಗಳು ಹಾಗೂ ಭಾವಸಂಚಾರವು ವಿಸ್ಮಯಕಾರಿಯಾದ ಸೌಂದರ್ಯದ ಜೊತೆಯಿಂದ ಕೂಡಿದ ಶಕ್ತಿ ಪಡೆದುಕೊಂಡಂತಿದೆ. ಈ ರೇಖಾ ಶೈಲಿಯು ರಸಾನುಭವದ ಭಾವಸೂಚಕವು ತಮ್ಮದೇ ಆದ ವಿನ್ಯಾಸವನ್ನು ರೂಪಿಸಿಕೊಂಡಿವೆ. ಕುಂಬಾರವರ ರೇಖೆಗಳಲ್ಲಿ ಭಾರತೀಯ ಸೊಗಡಿನ ನೈಪುಣ್ಯತೆಗಳನ್ನು ವಿವಿಧ ಭಂಗಿಗಳಲ್ಲಿ, ವಿವಿಧ ಹಾವ ಭಾವಗಳ ಸೊಬಗಿನಲ್ಲಿ ಆನಂದಿಸಬಹುದಾಗಿದೆಯಲ್ಲದೆ, ರೇಖೆಯನ್ನು ಸಹಿತ ಕಥನ ಕಲೆಗೆ ಹೊಂದಿಸಿ ಚಿತ್ರಿಸಿದ್ದಾರೆ. ಕಥನ ಶೈಲಿಯನ್ನು ರೇಖೆಗಳಲ್ಲಿ ಮೂಡಿಸಿ ಕಾವ್ಯದ ಸೊಬಗನ್ನು ತಂದು ಕೊಟ್ಟಿರುವುದನ್ನು ಕಾಣುತ್ತೇವೆ.

ಕುಂಬಾರವರ ರೇಖಾ ಚಿತ್ರಗಳ ಹರವು ವಿಸ್ತಾರವಾಗಿರುವುದರಿಂದ ಇಲ್ಲಿ ನಾವು ಸ್ಥೂಲವಾಗಿ ಸೂಕ್ಷ್ಮವಾದ ವಿವರಗಳನ್ನು ಪರಿಗಣಿಸಿ ಚರ್ಚಿಸಲಾಗಿದೆ. ಅವರ ರೇಖಾವಿನ್ಯಾಸವನ್ನು ವಿವಿಧ ಹಂತಗಳಲ್ಲಿ ಗುರುತಿಸಬಹುದು. ಮೊದಲನೆಯದಾಗಿ ಅವರು ಚಿತ್ರಿಸಿದ ಪೂರ್ವ ಸಿದ್ಧತೆಯ ಚಿತ್ರಗಳೆಂದೂ, ಎರಡನೆಯದಾಗಿ ಪೂರ್ಣಗ್ರಂಥಗಳಿಗೆ ರಚಿಸಿದ ರೇಖಾ ಚಿತ್ರಗಳು, ಮೂರನೆಯದಾಗಿ ವರ್ಣ ಚಿತ್ರಗಳಲ್ಲಿಯ ಹಾಗೂ ಶಿಲ್ಪರಚನೆಗಳ ಪೂರ್ವಸಿದ್ದತಾ ರೇಖಾ ಚಿತ್ರಗಳಲ್ಲಿಯ ಅವರ ರೇಖಾ ವಿನ್ಯಾಸ.

ಈ ಪೂರ್ವ ಸಿದ್ಧತೆಯ ರೇಖಾ ಚಿತ್ರ ರಚಿಸಲು ಕಲಾವಿದನಾದವನಿಗೆ ದೀರ್ಘಕಾಲದ ಪರಿಶ್ರಮ ಬೇಕಾಗುತ್ತದೆ. ಅಭ್ಯಾಸ ಬೇಕಾಗುತ್ತದೆ. ಆಕೃತಿಗಳ ಗುಣ ಲಕ್ಷಣಗಳನ್ನು ಕಂಡು ಹಿಡಿಯುವ ಕಣ್ಣುಬೇಕು, ಬಣ್ಣ ಬೆಳಕುಗಳ ಸ್ಪಷ್ಟವಾದ ಕಲ್ಪನೆ ಇರಬೇಕು, ಪಳಗಿದ ಚಿತ್ರಕಾರ ಈ ವಿಚಾರದಲ್ಲಿ ಕಣ್ಣಿನ ಸೂಕ್ಷ್ಮತೆ ಬೆಳೆಸಿಕೊಂಡಂತೆ ನೋಡಿದೊಡನೆ ರಬಸದಲ್ಲಿ ಚುರುಕುತನಗಳಿಸುತ್ತಾನೆ. ಇಂಥ ಪೂರ್ವಸಿದ್ಧತೆ ಇದ್ದಂಥ ವ್ಯಕ್ತಿ ನಾಳೆ ದಿನ ಒಂದು ದೊಡ್ಡ ಚಿತ್ರ ಸೃಷ್ಟಿಯನ್ನು ಮಾಡುವಾಗ ತಾನು ಹಿಂದೆ ಅಂಕಿಸಿಕೊಂಡ ರೇಖೆಗಳನ್ನು ತನ್ನ ಸೃಷ್ಟಿಯಲ್ಲಿ ಬಳಸುವುದು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಕುಂಬಾರವರ ಅಗಾಧ ಸಾಧನೆಯನ್ನು ಚಿತ್ರಗಳಲ್ಲಿಯೂ ಕಾಣಬಹುದಾಗಿದೆ.

ಶಿಲ್ಪ, ಚಿತ್ರಕಲಾ ಇತಿಹಾಸದಲ್ಲಿ ಅನೇಕ ಕಲಾವಿದರು ತಮ್ಮದೇ ಆದ ಶೈಲಿ ವೈಶಿಷ್ಟ್ಯತೆಯನ್ನು ತಮ್ಮ ಸಮಕಾಲೀನ ಕಲಾವಿದರಿಂದ ಬೇರೆಯೇ ಎನ್ನುವಂತೆ ತಮ್ಮ ಕಲಾಕೃತಿಗಳ ಮೂಲಕ ತಮ್ಮತನವನ್ನು ಅಭಿವ್ಯಕ್ತಿಸಿದ್ದಾರೆ. ಪ್ರಪಂಚದಲ್ಲಿ ಎಲ್ಲಾ ಶಿಲ್ಪಕಲಾವಿದರು ಒಂದಲ್ಲಾ ಒಂದು ರೀತಿಯಲ್ಲಿ ಒಬ್ಬರು ಇನ್ನೊಬ್ಬರನ್ನು ಅನುಕರಿಸಿದ ಹಿನ್ನೆಲೆಯಲ್ಲಿ ಸಹಜವಾಗಿ ಅವರ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ಕೊನೆಗೆ ತಮ್ಮದೇ ಆಗ ಮಾರ್ಗದಲ್ಲಿ ಚಿತ್ರ, ಶಿಲ್ಪಗಳನ್ನು ರಚಿಸಿ ತಮ್ಮ ಪ್ರತಿಭೆಯನ್ನು ಮೆರೆದು ತಮಗೆ ತಾವೇ ಸಾಟಿಯಾಗಿರುವುದನ್ನು ಸಹ ನೋಡುತ್ತೇವೆ.

ಶಿಲ್ಪ ರಚನೆಯ ಕಾಲದಲ್ಲಿ ಕಲಾವಿದನಿಗಿರುವ ಮಾನಸಿಕ ಭಾವನೆಗಳಂತೆ ಅವನ ಕಲಾಕೌಶಲ್ಯ ಕೂಡ ಬದಲಾಗುತ್ತದೆ. ಒಂದೊಂದು ಬಗೆಯ ಕೌಶಲ್ಯ ಹಾಗೂ ಶೈಲಿ ಬೇಕೆನಿಸಿದಾಗ. ಅದನ್ನು ಕಲಾವಿದ ತಾನಾಗಿಯೇ ತನ್ನ ಮನಸ್ಸಿನಿಂದ ಭಾವನೆಗಳಿಗೆ ರೂಪಕೊಡಲು ಯೋಗ್ಯವೆನಿಸುವ ಶೈಲಿಯನ್ನು ಪ್ರಯೋಗಿಸುತ್ತಾನೆ. ಮಾನಸಿಕ ಭಾವನೆಗಳನ್ನು ಪ್ರಕಟಿಸಲು ಪ್ರತಿಯೊಬ್ಬ ಕಲಾವಿದ ತನ್ನದೇ ಆದ ಶೈಲಿಯನ್ನು ಗುರುತಿಸಿ ರೂಪಿಸಿ ಬೆಳೆಸಿಕೊಳ್ಳಬೇಕಾಗುತ್ತದೆ. ಈ ಮಾತು ಕುಂಬಾರವರ ಶೈಲಿ ಮತ್ತು ತಂತ್ರಗಾರಿಕೆಗೂ ಅನ್ವಯಿಸುತ್ತದೆ.

ಒಟ್ಟಾರೆ ಕುಂಬಾರ ಅವರು ಕಲಾ ಶೈಲಿಗಳನ್ನು ಜಾನಪದ ಮತ್ತು ಶಿಷ್ಟಪದ ಎರಡರಲ್ಲೂ ಪ್ರಕಟಿಸಿದ್ದಾರೆ. ಇನ್ನೂ ಕೆಲವು ಶಿಲ್ಪಗಳು ಇವೆರಡರ ಸಮ್ಮಿಶ್ರಣದ ಶೈಲಿಯನ್ನು ಹುಟ್ಟು ಹಾಕಿವೆಯೆನಿಸುತ್ತದೆ.

ಕಲೆ ಮಾನವನ ಆಂತರಿಕ ಜೀವನದ ಅಭಿವ್ಯಕ್ತಿಯಾಗಿದ್ದರೂ, ಆತನ ಬಾಹ್ಯ ಬದುಕಿನ ಏರಿಳಿತಗಳನ್ನು ವೈಯಕ್ತಿಕವಾಗಿ ನಿಯಂತ್ರಿಸುವ ಶಕ್ತಿ ಹೊಂದಿದೆ. ಯಾವುದೇ ಕಲೆಯನ್ನು ಸ್ವೀಕರಿಸಿದಾಗ ಈ ಮಾತು ಅನ್ವಯಿಸುವಂತಹುದಾಗಿದೆ. ಈ ಹಿನ್ನೆಲೆಯಲ್ಲಿ ವೀರಪ್ಪ ಕುಂಬಾರವರು ಶಿಲ್ಪಕಲೆಯನ್ನು ವೃತ್ತಿಯಾಗಿ ಸ್ವೀಕರಿಸಿ ಜೀವನ ಸಾಗಿಸುತ್ತಾ, ಅದರಲ್ಲಿ ಅನೇಕ ಏರಿಳಿತಗಳನ್ನು ಕಂಡವರು, ಅವರು ಆಯುಷ್ಯದ ಹೆಚ್ಚಿನ ಭಾಗ ಕಲಾಕೃತಿಯ ನಿರ್ಮಾಣದಲ್ಲಿಯೇ ಕಳೆದರು. ಅವರು ಆರ್ಥಿಕ ಸ್ಥಿತಿ ಮಾತ್ರ ಹೇಳಿಕೊಳ್ಳುವಂತಹ ಸುಧಾರಣೆಯನ್ನು ಕಾಣಲಿಲ್ಲ.

ಕಲೆ ಯಾವಾಗಲೂ ಬಡತನ-ಸಮಸ್ಯೆಗಳನ್ನು ಬಯಸುವುದೇ ಹೆಚ್ಚಿನ ಸಂದರ್ಭಗಳಲ್ಲಿ ಕಂಡುಬರುತ್ತದೆ. ವೀರಪ್ಪ ಕುಂಬಾರವರು ಇದಕ್ಕೆ ಹೊರತಾಗಿಲ್ಲ. ಹುಟ್ಟಿನಿಂದಲೂ ಕಡು ಬಡತನದಲ್ಲಿಯೇ ಬೆಳೆದ ಕುಂಬಾರರವರು ಕಲಾ ಶ್ರೀಮಂತಿಕೆಗೆ ಹೆಸರು ಮಾಡಿದವರು. ಬಡತನದಿಂದಲೇ ಬಂದ ಅವರ ಹೋರಾಟಮಯ ಜೀವನವೇ ಒಂದು ಪಾಠವಿದ್ದಂತೆ. ಕಲಾಜೀವನದಲ್ಲಿ ಭೌತಿಕವಾದ ಇಂತಹ ಬಡತನ-

ಸಿರಿತನಕ್ಕೆ ಮಹತ್ವ ಎಂಬುದಿಲ್ಲ. ಅದೇನಿದ್ದರೂ ಹೃದಯ ಶ್ರೀಮಂತಿಕೆಗೆ ಸಂಬಂಧಿಸಿದ್ದಾಗಿದೆ.

ಕಲಾವಿದ ವೀರಪ್ಪ ಕುಂಬಾರವರು ಹೃದಯ ಶ್ರೀಮಂತಿಕೆಯಿಂದ ಕೂಡಿದ ವ್ಯಕ್ತಿತ್ವವುಳ್ಳವರಾಗಿದ್ದು, ಸಮಾಜದ ವಿವಿಧ ಸ್ಥರಗಳಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ. ವ್ಯಕ್ತಿನಿಷ್ಠೆ ನೆಲೆಯಿಂದ ಸಮಾಜ ಮುಖಿವಾಗಿ ಬೆಳೆದ ಇವರ ಕಲೆ, ಸಮುದಾಯ ಸಮಷ್ಠಿಯ ಪ್ರತಿಬಿಂಬವಾಗಿ ಹೊರಹೊಮ್ಮಿದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಇವರ ಕಲಾಕೃತಿಗಳು ನಾಡಿನ ವಿವಿಧ ಭಾಗಗಳಿಗೆ ಚದುರಿಹೋಗಿವೆ. ಕರ್ನಾಟಕವಲ್ಲದೇ ನೆರೆಯ ಮಹಾರಾಷ್ಟ್ರದ ಜನತೆಯೂ ಇವರ ಕಲೆಯನ್ನು ಮೆಚ್ಚಿಕೊಂಡಿರುವುದು ಸಾಕ್ಷೀಕರಿಸುತ್ತದೆ.

ಶಿಲ್ಪಕಲಾವಿದರೆಂದೇ ಖ್ಯಾತಿ ಹೊಂದಿದ ವೀರಪ್ಪ ಕುಂಬಾರವರು ವಿವಿಧ ಮಾಧ್ಯಮಗಳಲ್ಲಿ ಶಿಲ್ಪ ರಚನೆ ಮಾಡಿರುತ್ತಾರೆ. ಹೆಚ್ಚು ಪ್ರಮಾಣದಲ್ಲಿ ಅಮೃತ ಶಿಲೆ ಹಾಗೂ ಮಣ್ಣಿನ ಮೂರ್ತಿಗಳನ್ನು ಮಾಡಿದ್ದರೂ ಸಹಿತ ಅದರ ಜೊತೆಗೆ ವರ್ಣ ಚಿತ್ರಗಳನ್ನು ಹಾಗೂ ಗಾರೆಗಳಲ್ಲಿ ಶಿಲ್ಪಗಳನ್ನೂ ರಚಿಸಿದ್ದಾರೆ. ಇದಲ್ಲದೆ ಮರ, ಹಾಗೂ ಸಿಮೆಂಟ್ ಮತ್ತು ಮಿಶ್ರ ಮಾಧ್ಯಮಗಳಲ್ಲಿಯೂ ಇವರು ಶಿಲ್ಪಗಳನ್ನು ರೂಪಿಸಿರುವುದು ಕಂಡುಬರುತ್ತದೆ. ಇವರು ಶಿಲ್ಪಕಲಾ ವೃತ್ತಿಗೊಳ್ಳಲ್ಲೂ ಚಿಕ್ಕಂದಿನಲ್ಲಿ ಇವರು ತಯಾರಿಸುತ್ತಿದ್ದ ಮಣ್ಣಿನ ಬಸವ, ಗುಳ್ಳವ್ವ, ಗೌರವ್ವ, ನಾಗಪ್ಪ ಇಂತಹ ಶಿಲ್ಪಗಳೇ ಪ್ರೇರಣೆಯಾಗಿವೆ ಎಂದು ಇವರ ಜೀವನ ನೋಡಿದಾಗ ತಿಳಿದುಬರುತ್ತದೆ. ಇವರು ರಚಿಸಿದ ಶಿಲ್ಪಗಳಲ್ಲಿ ಬೇರೆ ಬೇರೆ ಮಾಧ್ಯಮಗಳು ಇರುವಂತೆ ಭಿನ್ನ ಭಿನ್ನ ಶೈಲಿಯ ಶಿಲ್ಪಕಲಾಕೃತಿಗಳು ಇವೆ. ಇಲ್ಲಿ ಆಯಾ ಮಾಧ್ಯಮದ ಶಿಲ್ಪರಚನೆಯ ವಿಧಾನಗಳು ಬೇರೆ ಬೇರೆಯಾಗಿರುತ್ತವೆ. ಶಿಲೆ ಮತ್ತು ಮರದಿಂದ ಮೂರ್ತಿ ತಯಾರಿಸುವಾಗ ಕೆತ್ತುವ ಕ್ರಿಯೆ ಪ್ರಧಾನವಾದರೆ, ಮಣ್ಣಿನ ಶಿಲ್ಪರಚನೆಯಲ್ಲಿ ಮೆತ್ತುವ ಕ್ರಿಯೆ ಪ್ರಧಾನವಾಗಿರುತ್ತದೆ. ವೀರಪ್ಪ ಕುಂಬಾರವರು ವಿವಿಧ ಮಾಧ್ಯಮಗಳಲ್ಲಿ ಶಿಲ್ಪಕಲಾಕೃತಿ ರಚನೆ ಮಾಡುವ ಕಲಾವಿದರಾಗಿದ್ದು ಈ ಮೂಲಕ ಶಿಲ್ಪರಚನೆಯ ಹಲವಾರು ವಿಧಾನಗಳು ಬೆಳಕಿಗೆ ಬಂದಿವೆ.

ಶಿಲ್ಪ ಕಲಾಕೃತಿಗಳು ವೀರಪ್ಪ ಕುಂಬಾರವರು ಕಾರ್ಯಕ್ಷಮತೆ ಮತ್ತು ಕಲಾವಂತಿಕೆಯನ್ನು ತೋರಿರುವುದರ ಜೊತೆಗೆ ಜನರ ಅಭಿರುಚಿ, ಆಪೇಕ್ಷೆ ಮತ್ತು ಧಾರ್ಮಿಕ ಹಿನ್ನೆಲೆಗಳನ್ನು ತಿಳಿಸಿಕೊಡುತ್ತವೆ.

ಸಾಂಪ್ರದಾಯಿಕ ಶಿಲ್ಪಕಲೆಯ ರಚನಾ ವಿಚಾರಗಳಿಂದ ಹಿಡಿದು ಅದರ ಪೂಜಾ ಪದ್ಧತಿಯವರೆಗೆ ಹತ್ತು ಹಲವು ಧಾರ್ಮಿಕ ನಿಯಮಗಳು, ಆಚಾರ ವಿಚಾರಗಳು

ವಿಶೇಷವಾದ ಮಹತ್ವ ಪಡೆದುಕೊಂಡಿದೆ. ಹಾಗಾಗಿ ಪಾರಂಪರಿಕ ಶಿಲ್ಪ ಕಲೆಯು ಆಧುನಿಕ ಶಿಲ್ಪಕಲೆಗಿಂತ ಭಿನ್ನದಾರಿಯಲ್ಲಿ ಸಾಗುತ್ತದೆ. ಇಂತಹ ಅನೇಕ ವಿಷಯಗಳು ಇವರ ಕೃತಿಗಳಲ್ಲಿ ಸ್ಥೂಲವಾಗಿ ಬೆಳಕು ಕಂಡಿವೆ.

ಸಾಂಪ್ರದಾಯಿಕ ಶಿಲ್ಪ ಕಲೆಯ ವಿಶಿಷ್ಟ ಗುಣ ಧರ್ಮಗಳನ್ನು ಮೈಗೂಡಿಸಿಕೊಂಡು ಕಲಾ ಕೃತಿಗಳನ್ನು ರಚನೆ ಮಾಡಿರುವ ಕುಂಬಾರರ, ಪರಿಸರ ಮತ್ತು ಬದುಕು ಅಧ್ಯಯನದಿಂದ, ಪರೋಕ್ಷವಾಗಿ ಪಾರಂಪರಿಕ ಶಿಲ್ಪಕಲೆಯ ರಕ್ಷಣೆಯ ಜೊತೆಗೆ, ಮರೆಯಾಗುತ್ತಿರುವ ಈ ಕಲಾ ಪ್ರಕಾರವನ್ನು ಮತ್ತು ಆ ಶೈಲಿಯ ಕಲಾವಿದರ ಮಹತ್ವವನ್ನು ಸಮಾಜಕ್ಕೆ ಪರಿಚಯಿಸಿದಂತಾಗಿದೆ.

ಕಲೆ ಮತ್ತು ಸಮಾಜ ಒಂದಕ್ಕೊಂದು ಪೂರಕವಾಗಿದ್ದು, ಸಮಾಜದ ಪ್ರೋತ್ಸಾಹ ಅದರ ಅಭಿಮಾನಗಳು ಕಲಾವಿದನಿಗೆ ಶ್ರೀರಕ್ಷೆಗಳಾಗಿವೆ. ಅದೇ ರೀತಿ ಕಲಾವಿದನ ಪ್ರತಿಭೆ, ಕಲಾಕೃತಿಗಳು ಸಮಾಜವನ್ನು ಸುಸಂಸ್ಕೃತ ಜೀವನದೆಡೆಗೆ ಕೊಂಡೊಯ್ಯುವ ಸಾಧನೆಗಳಾಗಬೇಕು, ಎನ್ನುವಂತಹ ಜ್ಞಾನಿಗಳ ಮಾತಿನಲ್ಲಿ ಸತ್ಯಾಂಶವಿದೆ. ಈ ನಿಟ್ಟಿನಲ್ಲಿಯೇ ವೀರಪ್ಪ ಕುಂಬಾರವರ ಕಲೆ ಮತ್ತು ಬದುಕು ಅವಿಸ್ಮರಣೀಯ.

## ರೇಖಾ ಚಿತ್ರಗಳು

ವೀರಪ್ಪ ಕುಂಬಾರರ ಕಲಾಕೃತಿಗಳ ಹರವು ತುಂಬ ವಿಸ್ತಾರವಾದುದಾಗಿದೆ. ಇವರ ಕಲಾಕೃತಿಗಳನ್ನು ರೇಖಾ ಚಿತ್ರಗಳು, ವರ್ಣಚಿತ್ರಗಳು ಮತ್ತು ಶಿಲ್ಪಕಲಾಕೃತಿಗಳು ಎಂದು ಮೂರು ವಿಧದಲ್ಲಿ ಗುರುತಿಸಬಹುದಾಗಿದೆ.

### ತಾಯಿ ಮತ್ತು ಮಗು

ಕಲಾವಿದ ವೀರಪ್ಪ ಕುಂಬಾರರು ಔಂದ್ ಮಹಾರಾಜರ ಆಸ್ಥಾನದಲ್ಲಿ ಕಲಾವಿದರಾಗಿದ್ದ ಸಂದರ್ಭದಲ್ಲಿ ಚಿತ್ರಿಸಿದ ಅನೇಕ ರೇಖಾ ಚಿತ್ರಗಳಲ್ಲಿ ಇದೂ ಒಂದಾಗಿದೆ.

ಕಲಾವಿದ ವೀರಪ್ಪನವರು ವರ್ಣ ಸಂಯೋಜನಾ ಚಿತ್ರವನ್ನು ಬಿಡಿಸಬೇಕಾದರೆ, ಮೊದಲು ಪೂರ್ವಭಾವಿ ರೇಖಾಚಿತ್ರಗಳನ್ನು (ಕೀ ಸ್ಕೆಚ್) ಮಾಡುತ್ತಿದ್ದರೆಂಬುದು ಇದರಿಂದ ತಿಳಿದು ಬರುತ್ತದೆ.

ಈ ಚಿತ್ರದಲ್ಲಿ ತಾಯಿಯೂ ತನ್ನ ಮಗುವನ್ನು ತೊಡೆಯ ಮೇಲೆ ಕುಳ್ಳರಿಸಿಕೊಂಡು ಕುಳಿತಿದ್ದು, ಆಕೆ ತೊಟ್ಟಿರುವ ಸೀರೆ ಮತ್ತು ಕುಪ್ಪಸಗಳು ಅಪ್ಪಟ ಮಹಾರಾಷ್ಟ್ರ ಶೈಲಿಯಲ್ಲಿ ಚಿತ್ರಿಸಲ್ಪಟ್ಟಿದೆ.

ಮಗುವಿನ ಚಿತ್ರ ಕೂಡಾ ಸುಂದರವಾಗಿ ಮೂಡಿ ಬಂದಿದ್ದು, ಚಿತ್ರದಲ್ಲಿ ರೇಖೆಗಳ ಲಯ ಹಾಗೂ (ಅನಾಟಮಿ) ದೇಹರಚನೆಯು ಎದ್ದು ಕಾಣುತ್ತದೆ. ಮುಖದಲ್ಲಿ ಓರೆನೋಟ ಬೀರಿರುವ ಲಕ್ಷಣ ಕಂಡುಬರುತ್ತಿದ್ದು ಈ ಚಿತ್ರವೂ ಒಟ್ಟಾರೆ ಮರಾಠಿಶೈಲಿ ಪ್ರಧಾನವಾಗಿ ಮೂಡಿ ಬಂದಿದೆ.

**ಪಂಚಮುಖ ಈಶ್ವರ**

ಈ ಕಲಾಕೃತಿಯಲ್ಲಿ ಪಂಚಮುಖ ಈಶ್ವರನನ್ನು ನಾವು ಕಾಣಬಹುದು. ಬಲಗಡೆ ಗಣೇಶ, ಎಡಗಡೆ ಪಾರ್ವತಿ ಆಸೀನರಾಗಿರುವ ದೃಶ್ಯವನ್ನು ಈ ಕಲಾಕೃತಿಯಲ್ಲಿ ನಾವು ಕಾಣುತ್ತೇವೆ. ಈಶ್ವರನ ಎದುರು ನಂದಿ ಕುಳಿತಿದ್ದು, ಪ್ರಸ್ತುತ ಕಲಾಕೃತಿಯಲ್ಲಿ ಈಶ್ವರನು ಹಸನ್ಮುಖಿಯಾಗಿ ಕುಳಿತಿರುವ ದೃಶ್ಯವನ್ನು ಕಾಣಬಹುದು. ರೇಖೆಗಳು ಅದ್ಭುತವಾಗಿದ್ದು, ಪೂರ್ವಭಾವಿ ಕಲಾಕೃತಿಯನ್ನು ರಚಿಸಲು ಬೇಕಾದ ರೇಖಾ ಚಿತ್ರಗಳನ್ನು ತಯಾರಿಸಿಕೊಂಡಿರುವುದನ್ನು ಇಲ್ಲಿ ಗುರುತಿಸಬಹುದಾಗಿದೆ.

**ಅರಸರು**

ಈ ಕಲಾಕೃತಿಗಳನ್ನು ನೋಡಿದರೆ, ಪಕ್ಕಾ ಮಹಾರಾಷ್ಟ್ರದ ಶೈಲಿಯಲ್ಲಿ ಇವೆ. ಇವು ಪೂರ್ಣ ಭಾವಚಿತ್ರಗಳು. ಈ ಕಲಾಕೃತಿಯ ತಲೆಯ ಮೇಲೆ ಪೇಟ ಮತ್ತು ಮುಖದಲ್ಲಿ ರಾಜ ಕಳೆ, ಕೊರಳಲ್ಲಿ ಸಣ್ಣ ಸಣ್ಣ ಸರಗಳು, ಮೈ ಮೇಲೆ ವಸ್ತ್ರಗಳು, ನೇರಿಗೆ, ರೇಖೆಗಳನ್ನು ಬಹಳ ಸೂಕ್ಷ್ಮವಾಗಿ ರಚಿಸಲಾಗಿದೆ.

ಈ ಕಲಾಕೃತಿಯಲ್ಲಿ ಮಧ್ಯಮ ಹರೆಯ ವಯಸ್ಸಿನವರನ್ನು ರಚಿಸಲಾಗಿದೆ. ಕುರ್ಚಿಗಳ ಮೇಲೆ ಒಂದೊಂದು ಭಂಗಿಯಲ್ಲಿ ಕುಳಿತಿದ್ದಾರೆ. ಹೀಗೆ ಒಟ್ಟು ಕಲಾಕೃತಿಗಳಿಗಿಂತ ಇದು ಬಹಳ ಸುಂದರವಾಗಿ ಮೂಡಿ ಬಂದಿದೆ.

**ಹೂದಾನಿಯ ಹಿಡಿದಿರುವ ಅಪ್ಸರೆ**

ಈ ಕಲಾಕೃತಿ ಮಹಾರಾಷ್ಟ್ರ ಶೈಲಿಯಲ್ಲಿದೆ ಹೂದಾನಿಯ ಹಿಡಿದು ನಿಂತಿರುವ ಕನ್ಯೆಯಂತೆ ಇದ್ದು, ದೇವಲೋಕದಿಂದ, ಭೂಲೋಕಕ್ಕೆ ಇಳಿದು ಬರುತ್ತಿರುವ ದೇವಕನ್ಯೆಯಂತೆ ಕಂಡು ಬರುತ್ತದೆ. ಇವಳ ಕೇಶಾಲಂಕಾರವು ಬಹಳ ಸುಂದರವಾಗಿದೆ ಮತ್ತು ಸೊಂಟದಲ್ಲಿ ಡಾಬು, ಇವಳ ಮೈ ಮೇಲೆ ಧರಿಸಿರುವ ಒಡವೆಗಳು ಇವಳಿಗಾಗಿಯೇ ರಚನೆಯಾಗಿವೆ ಎನ್ನುವಷ್ಟರ ಮಟ್ಟಿಗೆ ಹೊಂದಿಕೆಯಾಗಿದೆ. ಈ ಸುಂದರಿ ಧರಿಸಿರುವ ಸೀರೆ ಮೆರಗುಗೊಳಿಸುವಂತೆ ಇದೆ. ಈ ಕಲಾಕೃತಿಯೂ ಕೂಡ ಬಹಳ ಕಲಾತ್ಮಕವಾಗಿ ಮೂಡಿ ಬಂದಿದೆ. ಈ ಅಪ್ಸರೆಯ ಜೊತೆ ಈಕೆಯ

ಜೊತೆಗಿರುವ ದೇವಲೋಕದ ಬಾಲಕನು ರೆಕ್ಕೆಗಳನ್ನು ಹೊಂದಿ, ಬಿಲ್ಲನ್ನು ಹೆಗಲೇರಿಸಿ, ಬತ್ತಳಿಕೆಯನ್ನು ಹಿಡಿದಿರುವ ಚಿತ್ರವೂ ಕೂಡ ಉತ್ತಮ ರೇಖೆಗಳಿಂದ ಮೂಡಿಬಂದಿದೆ.

### ಸುಂದರಿ

ಈ ಕಲಾಕೃತಿಯೂ ಕೂಡ ಮಹಾರಾಷ್ಟ್ರ ಶೈಲಿಯನ್ನು ಹೊಂದಿದೆ. ಈ ಕಲಾಕೃತಿಯಲ್ಲಿ ಕೇಶಾಲಂಕಾರ, ನೇರ ದೃಷ್ಟಿ, ಮುಖದ ಭಾವವು ಚಿಂತಾಕಾಂತತೆಯನ್ನು ತೋರಿಸುತ್ತದೆ. ತುಳಸಿಯ ಕಟ್ಟೆಯ ಮೇಲೆ ಕೈಯನ್ನು ಇಟ್ಟು ನಿಂತಿರುವ ಭಂಗಿಯಲ್ಲಿದ್ದು, ಕೈಗಳಲ್ಲಿ ಬಳೆಗಳ ಅಲಂಕಾರವನ್ನು ಮಾಡಲಾಗಿದೆ. ಸೀರೆಯ ನೆರಿಗೆಯು ಬಹಳ ಸುಂದರವಾಗಿ, ಸೂಕ್ಷ್ಮವಾಗಿ ಮತ್ತು ಆಕರ್ಷಕವಾಗಿದೆ. ಹಿನ್ನೆಲೆಯಲ್ಲಿ ಅರಮನೆಯ ದೃಶ್ಯ ಕಂಡುಬರುತ್ತದೆ.

### ಶೃಂಗಾರಗೊಳ್ಳುತ್ತಿರುವ ಸುಂದರಿ

ಈ ಕಲಾಕೃತಿಯನ್ನು ವಿಶ್ಲೇಷಿಸಿದರೆ ಮಂಡಿಗಾಲು ಊರಿ ಅರೆ ವಸ್ತ್ರವನ್ನು ಧರಿಸುವ ಹಾಗೆ ಕಾಣಲ್ಪಡುತ್ತದೆ. ಮುಖ ಭಾವವು ಮುಗ್ಧತೆಯನ್ನು ಹೊಂದಿರುವಂತೆ ಮೂಡಿ ಬಂದಿದೆ. ಕೂದಲನ್ನು ಬಿಡಿಸಿಕೊಳ್ಳುತ್ತಿರುವ ಹಾಗೆ ಕಾಣುತ್ತಿದ್ದು, ಕೈಗಳಲ್ಲಿ ಬಳೆಗಳನ್ನು ರಚಿಸಲಾಗಿದೆ. ಮತ್ತು ಕೇಶಾಲಂಕಾರಕ್ಕಾಗಿ ಬಳಸಿರುವ ವಸ್ತ್ರಗಳನ್ನು ಚಿತ್ರಿಸಲಾಗಿದೆ. ಮುಂದೆ ದರ್ಪಣವನ್ನು ಚಿತ್ರಿಸಲಾಗಿದೆ. ಈ ಕಲಾಕೃತಿಯನ್ನು ಪ್ರಮಾಣಬದ್ಧವಾಗಿ ರಚಿಸಲಾಗಿದೆ.

### ದಂಪತಿಗಳು

ಈ ಕಲಾಕೃತಿಯು ದಂಪತಿಗಳು ಏಕಾಂತದಲ್ಲಿ ನಿದ್ರಾ ಮಗ್ನರಾದಂತೆ ಕಾಣುತ್ತಿದ್ದು, ಕೆಳಗಡೆ ಮಂಚಹಾಕಲಾಗಿದೆ. ಮಂಚದ ಮೇಲೆ ತಲೆದಿಂಬನ್ನು ರಚಿಸಲಾಗಿದೆ. ಮೈಮೇಲೆ ಅರೆ ವಸ್ತ್ರಧರಿಸಿರುತ್ತಾರೆ. ಒಬ್ಬರ ಮೇಲೆ ಒಬ್ಬರು ಕೈ ಹಾಕಿದ್ದು ಮುಖ ಭಾವವು ಶಾಂತತೆಯನ್ನು ತೋರುತ್ತದೆ. ಮಹಿಳೆ ಕಿವಿಯಲ್ಲಿ ಓಲೆ, ಕೈಯಲ್ಲಿ ಬಳೆಗಳನ್ನು ರಚಿಸಲಾಗಿದೆ. ಹಿನ್ನೆಲೆಯಲ್ಲಿ ಹೂದಾನಿ ಮತ್ತು ಕೋಣೆಯಲ್ಲಿ ಜಾಲರಿಯನ್ನು ಹಾಕಲಾಗಿದೆ. ಈ ಕೃತಿಯಲ್ಲೂ ಕಲಾಕೃತಿಯನ್ನು ರಚಿಸಲು ಬೇಕಾದ ಪೂರ್ವಭಾವಿ ರೇಖಾಚಿತ್ರವನ್ನು ತಯಾರಿಸಿಕೊಂಡಿರುವುದನ್ನು ಕಾಣಬಹುದು. ಈ ಕಲಾಕೃತಿಯೂ ಕೂಡ ಮಹಾರಾಷ್ಟ್ರದ ಶೈಲಿಯಲ್ಲಿ ರಚಿಸಲ್ಪಟ್ಟಿದೆ. ಹಾಗೂ ಭಾವನಾತ್ಮಕವಾಗಿ ಚಿತ್ರಿಸಲಾಗಿದೆ.

**ಪೂಜಾ ತಟ್ಟೆಯನ್ನು ಹಿಡಿದು ಹೊರಟಿರುವ ಮಹಿಳೆ**

ಈ ಕಲಾಕೃತಿಯಲ್ಲಿ ರೇಖೆಗಳಿಂದ ನಿರ್ಮಿಸಿದ ಮಹಿಳೆಯನ್ನು ಅತ್ಯಂತ ಆಕರ್ಷಕವಾಗಿ ಚಿತ್ರಿಸಿದ್ದಾರೆ. ಮುಖದಲ್ಲಿಯ ಕಣ್ಣು, ಮೂಗು, ಮೂಗಿನಲ್ಲಿರುವ ಮೂಗುಬಟ್ಟು, ಕೊರಳಲ್ಲಿರುವ ಹಾರ, ಸೊಂಟದಲ್ಲಿರುವ ಡಾಬು, ಉಬ್ಬಿರುವ ಸೀರೆ ಹಾಗೂ ಅದರ ನೀರಿಗೆಗಳನ್ನು ತುಂಬಾ ಚೆನ್ನಾಗಿ ರೇಖೆಗಳಿಂದ ನಿರ್ಮಿಸಿದ್ದಾರೆ. ಈ ರೇಖಾ ಚಿತ್ರವೂ ಸಹ ಮಹಾರಾಷ್ಟ್ರ ಶೈಲಿಯಲ್ಲಿ ರಚಿಸಿದ್ದಾರೆ.

**ಸರಸ್ವತಿ**

ಪ್ರಸ್ತುತ ಕಲಾಕೃತಿಯಲ್ಲಿ ಆಸೀನಳಾಗಿರುವ ಸರಸ್ವತಿಯ ಚಿತ್ರವನ್ನು ರೇಖೆಗಳಿಂದ ರಚಿಸಲಾಗಿದೆ. ಸರಸ್ವತಿಯು ಕೈಯಲ್ಲಿ ವೀಣೆ ಹಿಡಿದು ಕುಳಿತಿರುವ ದೃಶ್ಯ. ತಲೆಯ ಮೇಲೆ ಕಿರೀಟ, ಕೊರಳಲ್ಲಿರುವ ಹಾರಗಳು ಮತ್ತು ಕಿವಿಯ ಓಲೆಗಳು ಬಹಳ ಚೆನ್ನಾಗಿ ರೇಖೆಗಳಿಂದ ಚಿತ್ರಿಸಿದ್ದಾರೆ.

**ದರ್ಪಣವನ್ನು ನೋಡುತ್ತಿರುವ ಮಹಿಳೆ**

ಪ್ರಸ್ತುತ ಚಿತ್ರದಲ್ಲಿ ದರ್ಪಣವನ್ನು ಹಿಡಿದು ಮುಖವನ್ನು ನೋಡುತ್ತಿರುವ ದೃಶ್ಯವನ್ನು ನಾವು ಇದರಲ್ಲಿ ಕಾಣಬಹುದು. ಅರೆನಗ್ನವಾಗಿ ಕುಳಿತು ಹರಡಿಕೊಂಡಿರುವ ತಲೆಯ ಕೂದಲನ್ನು ನೋಡಿಕೊಳ್ಳುತ್ತಿರುವ ದೃಶ್ಯವನ್ನು ರೇಖೆಗಳಿಂದ ಬಹಳ ಚೆನ್ನಾಗಿ ರೂಪಿಸಿದ್ದಾರೆ.

**ಕೃಷ್ಣ ಮತ್ತು ರುಕ್ಮಿಣಿ**

ಈ ಕಲಾಕೃತಿಯಲ್ಲಿ ಕೃಷ್ಣನು ರಾಧೆಯ ಜೊತೆ ನಿಂತಿರುವಂತೆ ರಚಿಸಲಾಗಿದೆ. ಮತ್ತು ಈ ಕಲಾಕೃತಿಯ ಮೂಲಕ ಪೂರ್ವಭಾವಿ ರೇಖಾಚಿತ್ರಗಳನ್ನು (ಕೀ ಸ್ಕೆಚ್) ಮಾಡುತ್ತಿದ್ದರೆಂಬುದು ತಿಳಿದು ಬರುತ್ತದೆ.

ಈ ಕಲಾಕೃತಿಯಲ್ಲಿ ತಲೆಯ ಭಾಗದಲ್ಲಿ ಕಿರೀಟ, ಕೇಶ, ನವಿಲಿನ ಗರಿ ಮತ್ತು ಮುಖದ ಭಾಗದಲ್ಲಿ ನೇರ ದೃಷ್ಠಿ, ಮೂಗು, ತುಟಿ, ಕಿವಿಗಳಲ್ಲಿ ಓಲೆ, ಕೊರಳಲ್ಲಿ ಹಾರ, ಕೈಯಲ್ಲಿ ಕೊಳಲು ಮತ್ತು ಸೊಂಟದಲ್ಲಿ ಆಭರಣ ವಸ್ತ್ರ ಧರಿಸಲಾಗಿದೆ. ಈ ಭಾಗದಲ್ಲಿ ರೇಖೆಗಳ ಲಯ ಹಾಗೂ ಅನಾಟಮಿಯೂ ಎದ್ದು ಕಾಣುತ್ತದೆ. ಮತ್ತು ಹಿನ್ನೆಲೆಯಲ್ಲಿ ರಾಧಾ ನಿಂತಿರುವ ದೃಶ್ಯ ರಚಿಸಲ್ಪಟ್ಟಿದೆ. ಕೇಶಾಲಂಕಾರ, ಆಭರಣ ಮತ್ತು ನೇರ ದೃಷ್ಟಿ ಮೈಮೇಲೆ ವಸ್ತ್ರಾಲಂಕಾರ, ಸೊಂಟದಲ್ಲಿ ಡಾಬು, ಈ ತೆರನಾದ ಭಂಗಿಯಲ್ಲಿ ನಿಂತಿರುವಂತೆ ರಚಿಸಲಾಗಿದೆ. ಹಿನ್ನೆಲೆಯಲ್ಲಿ ನಿಸರ್ಗ ಚಿತ್ರ ರಚಿಸಲಾಗಿದೆ.

ಇದು ಸ್ವಲ್ಪ ಅಸ್ಪಷ್ಟವಾಗಿ ಕಾಣುತ್ತದೆ. ಮತ್ತು ಈ ಕಲಾಕೃತಿಗಳು ಮಹಾರಾಷ್ಟ್ರ ಶೈಲಿಯಲ್ಲಿ ಚಿತ್ರಿಸಲ್ಪಟ್ಟಿದೆ. ಈ ಚಿತ್ರವೂ ಸಹ ಭಾವನಾತ್ಮಕವಾಗಿ ರಚಿಸಲಾಗಿದೆ.

**ಕೃಷ್ಣ ಮತ್ತು ರಾಧೆ**

ವೀರಪ್ಪ ಕುಂಬಾರರು ಔಂದ ಮಹಾರಾಜನ ಆಸ್ಥಾನದಲ್ಲಿ ಕಲಾವಿದರಾಗಿದ್ದ ಸಂದರ್ಭದಲ್ಲಿ ಚಿತ್ರಿಸಿದ ಅನೇಕ ರೇಖಾ ಚಿತ್ರಗಳಲ್ಲಿ ಇದು ಒಂದಾಗಿದೆ.

ಈ ಚಿತ್ರದಲ್ಲಿ ಕೃಷ್ಣ ಮತ್ತು ರುಕ್ಮಿಣಿ ಇಬ್ಬರು ಅಕ್ಕಪಕ್ಕದಲ್ಲಿ ಕುಳಿತಿರುವಂತೆ ರಚಿಸಿದ್ದು, ಕೃಷ್ಣನು ಕೊಳಲನ್ನು ನುಡಿಸುತ್ತಿರುವಂತೆ, ರುಕ್ಮಿಣಿಯು ಆಲಿಸುವಂತೆ ಕುಳಿತಿದ್ದಾಳೆ. ಇವರ ಉಡುಪು ಆಭರಣ ಮತ್ತು ಕೇಶಾಲಂಕಾರ, ಮಹಾರಾಷ್ಟ್ರದ ಶೈಲಿಯಲ್ಲಿ ಇದೆ. ಈ ರೇಖಾ ಚಿತ್ರದಲ್ಲಿ ಕಲಾವಿದ ಲಯ ಹಾಗೂ ದೇಹರಚನೆಯನ್ನು ಎದ್ದು ಕಾಣುವಂತೆ ಚಿತ್ರಿಸಿದ್ದಾನೆ. ಬಂಡೆಯ ಮೇಲೆ ಕುಳಿತಿರುವಂತೆ ಹಿನ್ನೆಲೆಯಲ್ಲಿ ನಿಸರ್ಗದ ದೃಶ್ಯ ರಚಿಸಲಾಗಿದೆ.

**ಕೈ ಮುಗಿದುಕೊಂಡು ಕುಳಿತಿರುವ ಮಹಿಳೆ**

ಪ್ರಸ್ತುತ ಚಿತ್ರಕಲೆಯಲ್ಲಿ ಮಹಿಳೆಯೊಬ್ಬಳು ಕೈ ಮುಗಿದುಕೊಂಡು ಕುಳಿತಿರುವ ದೃಶ್ಯವನ್ನು ನಾವು ಇದರಲ್ಲಿ ಕಾಣಬಹುದು. ಮಹಿಳೆಯು ತೊಟ್ಟಿರುವ ಸೀರೆಯ ನೆರಿಗೆಗಳು ಮತ್ತು ಮಹಿಳೆಯ ಕೈಯಲ್ಲಿ ತೊಟ್ಟಿರುವ ಬಳೆಗಳು ಕಿವಿಯಲ್ಲಿ ಹಾಕಿರುವ ಓಲೆಗಳು ತಲೆಯ ಮೇಲೆ ಸೀರೆಯ ಸೆರಗು ಅತ್ಯಂತ ಚೆನ್ನಾಗಿ ರೇಖೆಗಳಿಂದ ನಿರ್ಮಿಸಿದ್ದಾರೆ.

**ಕೃಷ್ಣ**

ಪ್ರಸ್ತುತ ಚಿತ್ರದಲ್ಲಿ ಕೊಳಲನ್ನು ನುಡಿಸುತ್ತಿರುವ ಕೃಷ್ಣನ ದೃಶ್ಯವನ್ನು ನಾವು ಇದರಲ್ಲಿ ಕಾಣಬಹುದು. ಕೃಷ್ಣನ ಕಿರೀಟ, ತೊಟ್ಟಿರುವ ಆಭರಣಗಳು, ಕೊರಳಲ್ಲಿರುವ ಹಾರ, ಕೈಯಲ್ಲಿರುವ ಕೊಳಲು, ತೊಟ್ಟಿರುವ ರೇಷ್ಮೆಯ ಅಂಚಿನ ಕಚ್ಚೆ ಮುಂತಾದವುಗಳನ್ನು ಅತ್ಯಂತ ಆಕರ್ಷಕವಾಗಿ ರೇಖೆಗಳಿಂದ ನಿರ್ಮಿಸಿದ್ದಾರೆ.

ಒಟ್ಟಾರೆ ಇವರ ರೇಖಾಚಿತ್ರಗಳು ಅಧ್ಯಯನದ ಪೂರ್ವಭಾವಿ ಸಿದ್ಧತೆಗಾಗಿ ಮತ್ತು ಕಲಾಕೃತಿ ರಚನೆ ಕರಡು ಚಿತ್ರಗಳು ಪ್ರಮುಖವಾಗಿ ಕಂಡುಬರುತ್ತದೆ. ರೇಖೆಗಳಲ್ಲಿ ಅವರದೇ ಆದ ಸತ್ವಯುತ ವಿನ್ಯಾಸಗಳು ಪ್ರಮುಖವಾಗಿ ಕಂಡುಬರುವುದನ್ನು ಇಲ್ಲಿ ಗುರುತಿಸಬಹುದಾಗಿದೆ.

ಇದೇ ರೀತಿಯಾಗಿ ಹಲವಾರು ರೇಖಾಕೃತಿಗಳು ಲಭ್ಯವಿದ್ದು ಅವುಗಳಲ್ಲಿ ರಾಜರು, ಸುಂದರಿಯರು, ಬಾಲಕರು, ಮುಂತಾದ ಕರಡು ಚಿತ್ರಗಳು ಕುಂಬಾರರ ರೇಖಾಚಿತ್ರ ರಚನೆಯ ಪ್ರತಿಭೆಯನ್ನು ಎತ್ತಿಹಿಡಿಯುತ್ತದೆ.

ವೀರಪ್ಪ ಕುಂಬಾರವರು ರೇಖಾ ವರ್ಣಚಿತ್ರಗಳನ್ನು ರಚಿಸಿದಂತೆ ಶಿಲ್ಪಕಲಾಕೃತಿಗಳನ್ನು ರಚಿಸಿದ್ದಾರೆ. ಇವರು ರಚಿಸಿದ ಕಲಾಕೃತಿಗಳ ಹರವು ವಿಸ್ತಾರವಾಗಿದ್ದು, ಹೆಚ್ಚಿನ ಶಿಲ್ಪಗಳನ್ನು ಹಲವು ವಿಭಾಗಗಳಲ್ಲಿ ಈ ಕೆಳಗಿನಂತೆ ವಿಂಗಡಿಸಲಾಗಿದೆ :

**ಶಿಲಾಮಾಧ್ಯಮದ ಶಿಲ್ಪಿಗಳು :** 1. ಅಮೃತ ಶಿಲೆಯ ಶಿಲ್ಪಗಳು 2. ಕೃಷ್ಣ ಶಿಲೆಯ ಶಿಲ್ಪಗಳು

**ಗಾರೆ ಮಾಧ್ಯಮದ ಶಿಲ್ಪಗಳು :** 1. ದೇವಾಲಯದ ಮೇಲೆ ಛಾವಣಿಯಲ್ಲಿರುವ ಶಿಲ್ಪಗಳು 2. ಮೂರ್ತಿ ಶಿಲ್ಪಗಳು

**ಮಣ್ಣಿನ ಮಾಧ್ಯಮದ ಶಿಲ್ಪಗಳು :** ಮಣ್ಣಿನ ಮಾಧ್ಯಮದಲ್ಲಿ ಮಾನವ ಶಿಲ್ಪಗಳು ಮತ್ತು ದೇವ, ದೇವತೆಯರ ಶಿಲ್ಪಗಳು, ಮಣ್ಣೆತ್ತು ಬಸವ ಇತ್ಯಾದಿ.

ಈ ಮೇಲಿನ ವರ್ಗೀಕರಣದ ಶಿಲ್ಪಗಳನ್ನು ಕುರಿತು ಸ್ಥೂಲವಾಗಿ ಇಲ್ಲಿ ವಿವರಿಸಲಾಗಿದೆ.

## ಶಿಲಾಮಾಧ್ಯಮದ ಶಿಲ್ಪಗಳು

### ಅಮೃತ ಶಿಲೆಯ ಶಿಲ್ಪಗಳು

ಔಂದ್ ಮಹಾರಾಜರ ಆಸ್ಥಾನದಲ್ಲಿ ಕಲಾವಿದರಾಗಿ ಆಶ್ರಯವನ್ನು ಪಡೆದಿದ್ದ ವೀರಪ್ಪ ಕುಂಬಾರರು ಅನೇಕ ಚಿತ್ರಗಳಲ್ಲದೇ ಶಿಲ್ಪಗಳನ್ನು ಸಹ ರಚಿಸಿದ್ದರೆಂಬುದು ಗಮನಾರ್ಹ.

ಇವರು ಬಿಳಿ ಅಮೃತ ಶಿಲೆಯಲ್ಲಿ (ಮಾರ್ಬಲ್) ರಚಿಸಿರುವ ಅನೇಕ ಶಿಲ್ಪಗಳು ಇಂದಿಗೂ ಕೂಡಾ ಔಂದ್‌ನ ಶ್ರೀಭವಾನಿ ವಸ್ತುಸಂಗ್ರಹಾಲಯದಲ್ಲಿ ಸಂಗ್ರಹಿಸಿಟ್ಟಿದ್ದನ್ನು ನಾವು ನೋಡಬಹುದಾಗಿದೆ.

### ದತ್ತಾತ್ರೇಯ

ಈ ಶಿಲ್ಪವು ನೋಟಕ್ಕೆ ತ್ರಿಮುಖಗಳನ್ನು ಕಾಣುವಂತೆ ಬಿಳಿಯ ಮಾರ್ಬಲ್ಲಿನಲ್ಲಿ ಸೊಗಸಾಗಿ ಶಿಲ್ಪಿಸಲಾಗಿದ್ದು ಅತ್ಯಂತ ಮನೋಹರವಾಗಿದೆ. ಹಸನ್ಮುಖಿಯಾದ

ದತ್ತಾತ್ರೇಯ ನಿಂತ ಭಂಗಿಯಲ್ಲಿದ್ದು ಚತುರ್ಬಾಹುಗಳನ್ನು ಹೊಂದಿದ್ದು ಶಂಖಚಕ್ರ, ತ್ರಿಶೂಲವನ್ನು ಹಿಡಿದಿದ್ದು ಕೆಂಪು ಬಣ್ಣದ ವಸ್ತ್ರದಿಂದ ಅಲಂಕರಿಸಲಾಗಿದೆ. ಇದರ ಎತ್ತರ ಸುಮಾರು 31/2 ಅಡಿಗಳಿದ್ದು ಅಗಲ 2 ಅಡಿಗಳು, ಹಾಗೂ 10 ಇಂಚುಗಳ ದಪ್ಪದ ವ್ಯಾಸ ಹೊಂದಿದೆ. ಶಿಲ್ಪವು ಔಂದ್‌ನ ಯಮಾಯಿ ದೇವಾಲಯದ ಮೆಟ್ಟಿಲು ರಸ್ತೆಗೆ ಆರಂಭದಲ್ಲಿರುವ ದತ್ತಾತ್ರೇಯ ಮಠದ ಗುಡಿಯಲ್ಲಿದೆ.

16ನೇ ಶತಮಾನದ ರೋಮನ್ ಶೈಲಿಯ ಪಾಶ್ಚಾತ್ಯ ಶಿಲ್ಪಿಗಳಾದ ಜೀನ್ ಗೌಜಾನ್ (Jean Goujon)ನ "Nymphs from the Fountain of the Innocent's" "ನಿಂಪ್ಸ್ ಫ್ರಂ ದ ಫೌಂಟೇನ್ ಆಫ್ ದ ಇನ್ನೋಸೆಂಟ್ಸ್" ಕಲಾಕೃತಿಯ ಅರೆನಗ್ನ ಸುಂದರಿಯರ ಮುಗ್ಧ ಸೌಂದರ್ಯದ ಶಿಲ್ಪ ಸಂಕುಲವನ್ನು ಹಾಗೂ 19ನೇ ಶತಮಾನದ Antonio Canovaನ Venus Victorious (ಆಂಟೋನಿಯೊ ಕೆನೋವಾನ ವೀನಸ್ ವಿಕ್ಟೋರಿಯಸ್)ನ ಸೌಂದರ್ಯ ಪ್ರತಿಮೆಯ ಶಿಲ್ಪಗಳನ್ನು ಸಮೀಕರಿಸುವ ರೀತಿಯಲ್ಲಿ ಹಲವಾರು ಶಿಲ್ಪಗಳನ್ನು ಕೆತ್ತಿರುವರು ವೀರಪ್ಪ. ಅವುಗಳಲ್ಲಿ ವೀನಸ್ (ಸೌಂದರ್ಯ ದೇವತೆ)ನ ಈ ಸರಣೀ ನಾಲ್ಕು ಶಿಲ್ಪಗಳು, ಪ್ರಮುಖವಾದವು. ಈ ಕಲಾಕೃತಿಗಳ ಎತ್ತರ ಸುಮಾರು 3 ಅಡಿ, $^1/_2$ ಅಡಿ ಅಗಲ, ದಪ್ಪ 3/4 ಅಡಿ, ಪೀಠದ ದಪ್ಪ 6 ಇಂಚು ಇರುತ್ತದೆ.

### ಸೌಂದರ್ಯ ದೇವತೆ (ವೀನಸ್)–1

ಈ ಕಲಾಕೃತಿಯೂ ಔಂದ್‌ನ ಶ್ರೀ ಭವಾನಿ ವಸ್ತು ಸಂಗ್ರಹಾಲಯದಲ್ಲಿ ಸಂಗ್ರಹಿಸಿರುವುದನ್ನು ನಾವು ಈಗಲೂ ನೋಡಬಹುದು. ಇದು ವೃತ್ತಾಕಾರ ಪೀಠದ ಮೇಲೆ ನಿಂತಿರುವಂತೆ ಕೆತ್ತಲಾಗಿದೆ. ಈ ಕಲಾಕೃತಿಯನ್ನು ವೀನಸ್ ಎಂದು ಗುರುತಿಸಬಹುದು. ಇದು ಪಾಶ್ಚಿಮಾತ್ಯ ಕಲಾಶೈಲಿಯಲ್ಲಿ ಕಂಡು ಬರುತ್ತದೆ. ಈ ಕಲಾಕೃತಿಯನ್ನು ನೋಡಿದರೆ, ತಲೆಯಲ್ಲಿ ಕೇಶ ಸುತ್ತಿರುವಂತೆ ಕಾಣುತ್ತದೆ. ಅನಾಟಾಮಿಯು (ದೇಹರಚನೆ) ಬಹಳ ಚೆನ್ನಾಗಿ ಕೆತ್ತಲ್ಪಟ್ಟಿದ್ದು ಮುಖದ ಭಾವ, ಕಣ್ಣು, ಮೂಗು, ತುಟಿ, ಕೈ, ಕಾಲು ಸೂಕ್ಷ್ಮವಾಗಿ ಕೆತ್ತಲ್ಪಟ್ಟಿದ್ದನ್ನು ಕಾಣಬಹುದು.

ಆಕರ್ಷಕ ಹೊಳೆಯುವ ಬಿಳಿಯ ಬಣ್ಣದ ಇಟಾಲಿಯನ್ ಮಾರ್ಬಲ್‌ನಲ್ಲಿ ರಚಿಸಿರುವ, ಸೌಂದರ್ಯ ದೇವತೆಯ ಶಿಲ್ಪವು ಮುಗ್ಧತೆಯ ಸ್ವಭಾವದಿಂದ ಇದ್ದು ಸುಂದರ ದೇಹವನ್ನು ನುಣುಪಾದ ವಸ್ತ್ರದಿಂದ ಸ್ವಚ್ಛಗೊಳಿಸುತ್ತಿರುವ ಮೈಸಿರಿ, ಅರೆನಗ್ನರೂಪದಲ್ಲಿ ಎವೆಯಿಕ್ಕದೆ ತನ್ನಲ್ಲೇ ಮೈಮರೆತ ಸುಂದರಿಯ ತ್ರಿಮಾನ ಶಿಲ್ಪ ಇದಾಗಿದ್ದು. ಸುಕೋಮಲ ದೇಹದ ಮೇಲೆ ಯಾವುದೇ ರೀತಿಯ ನಾಟಕೀಯ ಬೆಳವಣಿಗೆಗಳನ್ನು ಪ್ರಕಟಿಸದೆ ನೋಡುಗನ ಕುತೂಹಲವನ್ನು ಕೆರಳಿಸುವಂತೆ ಕಲಾವಿದ ಸೃಷ್ಟಿಸಿದ್ದಾನೆ.

### ಸೌಂದರ್ಯ ದೇವತೆ–2

ಈ ಕಲಾಕೃತಿಯು ಒಂದನೇ ಶಿಲ್ಪದ ಮುಂದುವರೆದ ರೀತಿಯಲ್ಲಿಯೇ ಇರುವ ಈ ಶಿಲ್ಪವು ತುಸು ಉಲ್ಲಾಸವನ್ನು ಅನುಭವಿಸಿ, ಮೈಮೇಲಿನ ವಸ್ತ್ರವನ್ನು ಜತನ ಮಾಡುತ್ತಾ, ಎಡಭಾಗಕ್ಕೆ ಅರ್ಧಭಂಗಿಯಲ್ಲಿ ತಿರುಗಿ ಪ್ರತಿಕ್ರಿಯಿಸಿರುವಂತೆ ಶಿಲ್ಪಿಸಿದ್ದು, ಇಲ್ಲಿಯೂ ತಾಜಾತನದ ಅನುಭವವನ್ನು ಕಲಾವಿದ ಸೃಷ್ಟಿಸಿದ್ದು, ಸೌಂದರ್ಯ ದೇವತೆ ಶೀರ್ಷಿಕೆಗೆ ತಕ್ಕ ಕಲಾಕೃತಿಯನ್ನು ರಚಿಸಿರುವುದು ಇಟಾಲಿಯನ್ ಬಿಳಿ ಮಾರ್ಬಲ್ ಆದರೂ ಜೀವಂತಿಕೆಯು ಕಲಾಕೃತಿಯಲ್ಲಿ ಮೂಡಿದಂತಿದೆ. ಅಂಗರಚನೆ ಅದ್ಭುತವಾಗಿದೆ.

### ಸೌಂದರ್ಯದೇವತೆ–3

ಈ ಕಲಾಕೃತಿಯು ಬೇರೆ ಕೃತಿಗಳಿಗಿಂತ ಸ್ವಲ್ಪ ಆಕಾರದಲ್ಲಿ ವಿಸ್ತಾರವಿದ್ದು, ದೇಹದ ಮೇಲ್ಭಾಗವನ್ನು ನಗ್ನವಾಗಿ ಶಿಲ್ಪಿಸಿ, ಹರೆಯದ ಮುಗ್ಧ ಹೆಣ್ಣಿನ ದೇಹ ಸೌಂದರ್ಯವು ನೋಡುಗರ ಕುತೂಹಲಕ್ಕೆ ಮೀಸಲು ಎನ್ನುವ ರೀತಿಯಲ್ಲಿ ಕಂಡುಬರುತ್ತಿದ್ದು, ಕೃತಿಯಲ್ಲಿ ನುಣುಪಾದ ವಸ್ತ್ರವು ಪೃಷ್ಠದಿಂದ ಕೆಳಗೆ ಜಾರುವ ರೀತಿಯಲ್ಲಿದ್ದು, ವಸ್ತ್ರದೊಂದಿಗೆ ತನ್ನ ಎರಡು ಕೈಗಳಿಂದ ಎಡಗಾಲಿನ ತೊಡೆಯ ಮೇಲೆ ಊರಿ, ಗಂಭೀರತೆಯನ್ನು ಮುಗ್ಧ ರೀತಿಯಲ್ಲಿ ಪ್ರತಿನಿಧಿಸುತ್ತಿರುವ ಶಿಲ್ಪಕೃತಿ ಇದಾಗಿದ್ದು, ಅತೀ ಮನಮೋಹಕ ಶಿಲ್ಪವನ್ನು ಶಿಲ್ಪಕಾರ ಬಹಳ ನಾಜೂಕಿನಿಂದ ಸೃಷ್ಟಿಸಿದ್ದಾರೆ.

### ಸೌಂದರ್ಯದೇವತೆ–4

ಅದ್ಭುತ ಸೌಂದರ್ಯ ದೇವತೆಯ ಶಿಲ್ಪಗಳಲ್ಲಿ ಒಂದಾದ ಆಕರ್ಷಣೀಯ ದೇಹಸಿರಿಯ, ವೈಯ್ಯಾರದ ಅರೆನಗ್ನ ಶಿಲ್ಪ ಇದಾಗಿದ್ದು, ಇಲ್ಲಿಯೂ ಕೂಡ ತನ್ನ ದೇಹವನ್ನು ನುಣಪಾದ ವಸ್ತ್ರದಿಂದ ಒರೆಸಿಕೊಳ್ಳುವಂತಿದ್ದು, ಎಡಗಾಲಿನ ಮೊಣಕಾಲಿನ ಕೆಳಗೆ ಬಲಗೈ ಚಾಚಿ ಸ್ವಚ್ಚತೆಯ ಕ್ರಿಯೆನ್ನು ಮುಂದುವರೆಸುತ್ತಿದ್ದು, ಮುಖಭಾವವು ಮಾತನ್ನು ಹೊರಹಾಕಲು ಪ್ರಯತ್ನಿಸುತ್ತಿರುವಂತೆ ಕೆತ್ತಲ್ಪಟ್ಟಿದ್ದು. ಕೇಶದ ಶೈಲಿಯು ಅದ್ಭುತವಾಗಿದೆ. ತ್ರಿಮಾನ ಶೈಲಿಯ ಈ ಶಿಲ್ಪವು ಆಕರ್ಷಕವಾಗಿ ನೋಡುಗರ ಕಣ್ಮನ ತಣಿಸುತ್ತದೆ.

### ಮೇನಕೆ–ತಿಲೋತ್ತಮೆ

ಈ ಶಿಲ್ಪವು ಕೂಡ ಇಟಾಲಿಯನ್ ಬಿಳಿ ಮಾರ್ಬಲ್‌ನಲ್ಲಿ ಕೆತ್ತಲ್ಪಟ್ಟಿದ್ದು ಒಂದೇ ಕಲ್ಲಿನಲ್ಲಿ ಎರಡು ಆಕೃತಿಗಳು ಜೋಡಿಯಾಗಿ ಮೂಡಿ ಬಂದಿವೆ. ಇದರ ಶೀರ್ಷಿಕೆಯಂತೆ ಮೇನಕೆಯು ತಿಲೋತ್ತಮೆಯನ್ನು ಆಲಂಗಿಸಿಕೊಂಡು

ಶಾಂತವಾಗಿರುವಂತೆ ಮುಖಭಾವವನ್ನು ಕೆತ್ತಿದ್ದು. ಭಾರತೀಯ ಶೈಲಿಯ ಉಡುಗೆಯೊಂದಿಗೆ ಸೀರೆಯನ್ನು ಉಟ್ಟು, ಕೇಶದ ಮುಡಿಯು ಅಚ್ಚುಕಟ್ಟಾಗಿ ಬಾಚಿ ಗಂಟುಹಾಕಿರುವ ತಿಲೋತ್ತಮೆ ಹಾಗೂ ತನ್ನ ಮುಡಿಯ ಕೇಳರಾಶಿಯನ್ನು ಸ್ವಚ್ಛವಾಗಿ ಬಾಚಿ, ಗಂಟುಹಾಕದೆ ಸ್ವತಂತ್ರವಾಗಿ ಕೇಶವನ್ನು ಹರಡಿ ಕೊಂಡಂತೆ ಮೇನಕೆಯು ಇದ್ದು, ಆಕೆಯ ಬಲಗೈ ತಿಲೋತ್ತಮೆಯ ಸೊಂಟವನ್ನು ಬಳಸಿರುವಂತೆ, ವಸ್ತ್ರಗಳು ಗಾಳಿಯಲ್ಲಿ ತೇಲುವ ರೀತಿಯಲ್ಲಿ ಬಾಸವಾಗುವಂತೆ, ಭಾರತೀಯ ಸೃಜನಾತ್ಮಕ ಶೈಲಿಯಲ್ಲಿ ರಚಿಸಿರುವ ಶ್ರೇಷ್ಠ ಕಲಾ ಕೃತಿ ಇದಾಗಿದೆ. ಶಿಲ್ಪಕಾರನು ಇಬ್ಬರ ನಡುವಿನ ಬಾಂಧವ್ಯವನ್ನು ಅಜಾರಾಮರವಾಗಿರುವಂತೆ ಶಿಲ್ಪಿಸಿದ್ದಾನೆ.

**ಶ್ರೀ ಬಿ.ಆರ್. ಕೋಟ್ಯಾಳ್ಕರ್‌ರವರ ಭಾವಚಿತ್ರ**

ಶ್ರೀ ಬಿ.ಆರ್. ಕೋಟ್ಯಾಳ್ಕರ್‌ರವರ ಭಾವಚಿತ್ರವನ್ನು ರಚಿಸಿ, ಚಿತ್ರ ಕಲೆಯಲ್ಲಿನ ತಮ್ಮ ಕೈಚಳಕವನ್ನು ತೋರಿಸಿರುವ, ಕುಂಬಾರರ ಈ ಕಲಾಕೃತಿ ಗುರುವಿಗೆ ಗುರುದಕ್ಷಿಣೆಯಂತಿದೆ. ತುಂಬಾ ಸೊಗಸಾಗಿ ಮೂಡಿ ಬಂದಿರುವ ಈ ಕಲಾಕೃತಿಯು ಔಂದ್ ಶ್ರೀ ಭವಾನಿ ಕಲಾ ಸಂಗ್ರಹಾಲಯದಲ್ಲಿದ್ದು ಇಂದಿಗೂ ಉತ್ತಮ ರೀತಿಯಲ್ಲಿದೆ.

**ಯಮಾಯಿ ದೇವಾಲಯದ ಆವರಣ ಮತ್ತು ಮೆಟ್ಟಿಲುಗಳ ಬಳಿಯ ಶಿಲ್ಪಗಳು**

ಔಂದ್‌ನ ಯಮಾಯಿ ದೇವಾಲಯದ ಪ್ರವೇಶದ ನಂತರ ಬಲಭಾಗ ಪಡಸಾಲೆಯಲ್ಲಿ ಧಾರ್ಮಿಕ ಶಿಲ್ಪಗಳು ಕುಳಿತ ಭಂಗಿಯಲ್ಲಿದ್ದು ದತ್ತಾತ್ರೇಯ (ತ್ರಿಮುಖ), ವೀಣೆನುಡಿಸುತ್ತಿರುವ ಸರಸ್ವತಿ, ಸಂಜೀವಿನಿ ಪರ್ವತ ಹೊತ್ತು ಹಾರುತ್ತಿರುವ ಭಂಗಿಯ ಆಂಜನೇಯ, ಆದಿಶೇಷನ ಮೇಲೆ ಪವಡಿಸಿರುವ ಭಂಗಿಯ ನಾರಾಯಣ, ಕುಳಿತ ಭಂಗಿಯಲ್ಲಿರುವ ಲಕ್ಷ್ಮೀ ದೇವತೆ ಈ ಶಿಲ್ಪಗಳು ಸುಮಾರು $2^1/_2$ ಅಡಿ ಉದ್ದ, $1^3/_4$ ಅಡಿ ಅಗಲ, 1 ಅಡಿಯವರೆಗೆ ಸುತ್ತಳತೆ ಹೊಂದಿದ್ದು, ಬಿಳಿಯ ಮಾರ್ಬಲ್ ಕಲ್ಲಿನಿಂದ ಸುಂದರವಾಗಿ ಮೂಡಿಬಂದ ಶಿಲ್ಪಗಳಾಗಿದ್ದು. ಇವುಗಳಲ್ಲಿ ಆಭರಣಗಳ ಸ್ಥಳಗಳಲ್ಲಿ ಚಿನ್ನವನ್ನು ಲೇಪಿಸಿರುವುದನ್ನು ಗಮನಿಸಬಹುದಾಗಿದ್ದು, ಜೋಪಾನ ಮಾಡಿ ಗಾಜಿನ ಪಟ್ಟಿಕೆಯನ್ನು ಅಳವಡಿಸಲಾಗಿದೆ.

ಸೂರ್ಯದೇವನು ಸಾರಥಿಯೊಂದಿಗೆ ಅಶ್ವಗಳ ಸವಾರಿಯೊಂದಿಗೆ ಸಂಚರಿಸುತ್ತಿರುವಂತೆ ರಚಿಸಲಾಗಿರುವ ಶಿಲ್ಪವು ತುಂಬಾ ಮನೋಹರವಾಗಿದ್ದು ಸುಮಾರು 4 ಅಡಿ ಉದ್ದ, $2^1/_2$ ಅಡಿ ಅಗಲ, 2 ಅಡಿ ದಪ್ಪದ ವ್ಯಾಸದಲ್ಲಿ ರಚನೆಗೊಂಡಿದ್ದು ಬಿಳಿಯ ಮಾರ್ಬಲ್ಲಿನಲ್ಲಿ ಶಿಲ್ಪಿಸಲಾಗಿದ್ದರೂ, ಆಭರಣ ಹಾಗೂ ಧರಿಸಿರುವ ಕಿರೀಟಕ್ಕೆ ಚಿನ್ನವನ್ನು ಲೇಪಿಸಿರುವುದು ಶೃಂಗಾರಮಯವಾಗಿದೆ.



ಮೇನಕೆ ಮತ್ತು ತ್ರಿಲೋತ್ತಮೆ



ಶ್ರೀ ವೀರಪ್ಪ ಕುಂಬಾರ ಕೊಟ್ಯಾಳ್ಕರ್ ರಚಿಸಿರುವ
ಅವರ ಭಾವನವರಾದ ಶ್ರೀ ಬಿ.ಆರ್. ಕೊಟ್ಯಾಳ್ಕರ್ ಅವರ ಭಾವಚಿತ್ರ

## ೨೦೦೫ನೇ ಸಾಲಿನ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಗೌರವ ಪ್ರಶಸ್ತಿ ಪ್ರದಾನ ಸಮಾರಂಭ



ಶ್ರೀ ಬಿ.ಎನ್. ಪರಡ್ಡಿ, ಶ್ರೀ ಕೆ. ಶಾಮರಾಯ ಆಚಾರ್ಯ, ಡಾ. ಕೆ. ಅನ್ನದಾನಿ
ಶ್ರೀ ಎನ್. ಮರಿಶಾಮಾಚಾರ್, ಶ್ರೀ ವೀರಪ್ಪ ಕುಂಬಾರ ಕೊಟ್ಯಾಳ್ಕರ್ (ಕುಳಿತಿರುವವರು)
ಶ್ರೀ ಮುದ್ದುಮೋಹನ್, ಶ್ರೀ ವೆಂಕಟಾಚಲಪತಿ, ಲೇಖಕ ಶ್ರೀ ಜಿ. ಲಕ್ಷ್ಮೀಪತಿ

ವಿನಾಯಕನ ಶಿಲ್ಪವು ತುಂಬಾ ಸುಂದರವಾಗಿ ಮೂಡಿ ಬಂದಿದ್ದು. ವಿನಾಯಕನು ಕುಳಿತ ಭಂಗಿಯಲ್ಲಿದ್ದು. ಸಿದ್ದಿ-ಬುದ್ದಿಯರು ಅಕ್ಕಪಕ್ಕದಲ್ಲಿ ನಿಂತಿರುವ ಭಂಗಿಯಲ್ಲಿ ಶಿಲ್ಪಿಸಿರುವ ಶಿಲ್ಪವು ಸುಮಾರು $4^1/_2$ ಅಡಿ ಉದ್ದ, $2^3/_4$ ಅಡಿ ಅಗಲ, ಹಾಗೂ 2 ಅಡಿ ದಪ್ಪವಿದ್ದು, ಬಿಳಿಯ ಮಾರ್ಬಲ್ಲಿನಲ್ಲಿ ರಚನೆಗೊಂಡಿದೆ. ಇದೇ ರೀತಿಯ ಇನ್ನೊಂದು ಶಿಲ್ಪವು ಪಶ್ಚಿಮಕ್ಕೆ ಮುಖಮಾಡಿದ್ದು, ವಿನಾಯಕನ ತೊಡೆಗಳ ಮೇಲೆ ಸಿದ್ದಿ-ಬುದ್ದಿಯರು ಕುಳಿತಿದ್ದು, ಗರುಡ ಮತ್ತು ಆಂಜನೇಯ ಅನುಕ್ರಮವಾಗಿ ಎಡ ಮತ್ತು ಬಲಭಾಗದಲ್ಲಿ ಕೈಮುಗಿದು ಪ್ರಾರ್ಥಿಸುತ್ತಿರುವಂತೆ ಶಿಲ್ಪಿಸಿದ್ದು, ಆಭರಣಗಳಿಗೆ ಚಿನ್ನವನ್ನು ಲೇಪನ ಮಾಡಲಾಗಿದೆ.

## ಹಯಗ್ರೀವ, ನಾರದರ ಶಿಲ್ಪಗಳು

ಯಮಾಯಿ ದೇವಾಲಯದ ಹೊರಗಡೆ ದೇವಾಲಯದಿಂದ ಕೆಳಗಡೆಗೆ ಇಳಿದು ಬರುವ 432 ಮೆಟ್ಟಿಲುಗಳ ದಾರಿಯಲ್ಲಿ ಸುಮಾರು 120 ಮೆಟ್ಟಿಲುಗಳ ಅಂತರಗಳಲ್ಲಿ ಬಿಳಿಯ ಮಾರ್ಬಲ್ ಶಿಲೆಗಳಲ್ಲಿ ಕೆತ್ತಿರುವ ಹಯಗ್ರೀವ, ನಾರದರ ಶಿಲ್ಪಗಳು ಸಂಗೀತ ವಾದ್ಯಗಳೊಂದಿಗೆ ನಿಂತಿರುವ ಭಂಗಿಯ ಶಿಲ್ಪಗಳು ಎದುರು ಬದುರಾಗಿ ಸ್ಥಾಪನೆಗೊಂಡಿವೆ. ಇವುಗಳ ಎತ್ತರ ಸುಮಾರು 8 ಅಡಿಗಳು, ಅಗಲ 3 ಅಡಿಗಳು, ದಪ್ಪ 1 ರಿಂದ $1^1/_2$ ಅಡಿಗಳಷ್ಟಿದ್ದು. ಉತ್ತಮವಾದ ಲಾಲಿತ್ಯದಿಂದ ಕೂಡಿದೆ. ವಿಸ್ತಾರವಾದ ಎದೆಭಾಗ, ವಸ್ತ್ರವಿನ್ಯಾಸ, ಮುಖಲಾವಣ್ಯಗಳು ಸುಂದರವಾಗಿ ಮೂಡಿಬಂದಿದೆ.

ನಾರದ, ಹಯಗ್ರೀವ, ಶಿಲ್ಪಗಳು ಭಾವನೆಗಳನ್ನು ಪ್ರಕಟಿಸಿರುವ ರೀತಿಯು ಅಮೋಘವಾಗಿರುವಂತೆ, ಲಾಲಿತ್ಯವನ್ನು ರೂಪಿಸಿಕೊಂಡಿರುವಂತೆ ಶಿಲ್ಪಿಸಿದ್ದು ಕಲಾವಂತಿಕೆಯು ಸೊಗಸಾಗಿ ಮೂಡಿಬಂದಿದೆ. ವಸ್ತ್ರವಿನ್ಯಾಸ, ದೇಹರಚನೆ, ಅಂಗಾಂಗಗಳ ಸ್ಪಷ್ಟತೆಯು ನೈಜವಾಗಿರುವಂತೆ ರಚಿಸಲಾಗಿದೆ.

## ಜಯ-ವಿಜಯರ ಶಿಲ್ಪಗಳು

ಸುಮಾರು 150 ಮೆಟ್ಟಿಲುಗಳನ್ನು ದಾಟಿ ಮುಂದೆ ಸಾಗಿಬಂದರೆ, ಜಯ ಮತ್ತು ವಿಜಯ ದ್ವಾರಪಾಲಕರ ಶಿಲ್ಪಗಳು ಎದುರುಬದುರಾಗಿ ಮೆಟ್ಟಿಲುಗಳ ಆಕಡೆ ಈಕಡೆ ನಿಲ್ಲಿಸಲ್ಪಟ್ಟಿದ್ದು, 'ಮೂಲಪುರುಷ' ಎಂದು ಇವುಗಳ ನಾಮಫಲಕಗಳ ಮೇಲೆ ಕೆತ್ತಿದ್ದು, ಔಂದ್ ಸಂಸ್ಥಾನದ ಆಳ್ವಿಕೆಗಾರರ ಹೆಸರುಗಳನ್ನು ನಮೂದಿಸಲಾಗಿದೆ. ಈ ಶಿಲ್ಪಗಳು ಬಹಳ ನಾವೀಣ್ಯದಿಂದ ಸುಂದರವಾಗಿ ಕೆತ್ತಲ್ಪಟ್ಟಿದ್ದು, ಸುಮಾರು 8 ಅಡಿಗಳಷ್ಟು ಎತ್ತರ, 3 ಅಡಿಗಳ ದಪ್ಪ, 1 ರಿಂದ $1^1/_2$ ಅಡಿ ದಪ್ಪವನ್ನು ಹೊಂದಿರುವ ಈ ಶಿಲ್ಪಗಳು ಶಂಖ, ಚಕ್ರ, ಗದೆ, ಕಮಲ ಪುಷ್ಪದೊಂದಿಗೆ ಸೊಗಸಾಗಿ ಕೆತ್ತಲ್ಪಟ್ಟಿವೆ.

## ಮೃಗಗಳ ಶಿಲ್ಪಗಳು

ಮೇಲಿನ ಶಿಲ್ಪಗಳನ್ನು ನೋಡಿ ಮುಂದೆ ಬಂದರೆ, ಇಳಿದು ಬರುವ ದಾರಿಯಲ್ಲಿ ಕುಳಿತ ಭಂಗಿಯಲ್ಲಿರುವ ಹುಲಿ ಮತ್ತು ಸಿಂಹಗಳನ್ನು ಬಿಳಿ ಮತ್ತು ಕೆಂಪು ಬಣ್ಣ ಮಿಶ್ರಿತ ಮಾರ್ಬಲ್ಲಿನಿಂದ, ಜೀವಂತಿಕೆಯಿಂದ ಕೂಡಿದ ಹಾಗೆ ಗಾಂಭೀರ್ಯದ ಪ್ರದರ್ಶನವನ್ನು ನೀಡುತ್ತಿರುವಂತೆ ಕೆತ್ತಲ್ಪಟ್ಟಿದ್ದು, ಮೆಟ್ಟಿಲುಗಳ ಎಡ ಮತ್ತು ಬಲಭಾಗಗಳಲ್ಲಿ ಸ್ಥಾಪಿಸಲ್ಪಟ್ಟಿವೆ. ಇವುಗಳ ನಂತರ ಸಿಂಹ ಮತ್ತು ಸಿಂಹಿಣಿಯನ್ನು ಸ್ಥಾಪಿಸಲ್ಪಟ್ಟಿದ್ದು, ಇವುಗಳು ಕೂಡ ಬಿಳಿ ಮತ್ತು ಕೆಂಪುಬಣ್ಣಮಿಶ್ರಿತ ಮಾರ್ಬಲ್ ಕಲ್ಲಿನಲ್ಲಿ ರಚಿಸಲ್ಪಪಟ್ಟಿದ್ದು, ಸಿಂಹಿಣಿಯ ಭಾವವು ಗರ್ಜಿಸುತ್ತಾ, ಕೆರಳಿ ಮೇಲೆರಗುವುದಕ್ಕೆ ಸಿದ್ಧವಾಗಿರುವಂತೆ ಮುಂಗಾಲುಗಳ ಮೇಲೆ ನಿಂತಿರುವಂತೆಯೂ, ಸಿಂಹವು ಆರಾಮವಾಗಿ ಪವಡಿಸಿ ಮುಖ ಮೇಲೆತ್ತಿ ದಿಟ್ಟಿಸುತ್ತಿರುವ ಹಾಗೆ ಕೆತ್ತಲ್ಪಟ್ಟಿದೆ. ಇವುಗಳ ತರುವಾಯ ಹುಲಿಗಳೆರಡನ್ನು ಎದುರು-ಬದುರಾಗಿರುವಂತೆ ಕೆತ್ತನೆಮಾಡಿ ನಿಲ್ಲಿಸಲಾಗಿದೆ. ಒಟ್ಟಾರೆ ಈ ಮೃಗಗಳು ಸುಮಾರು 2 ರಿಂದ 3 ಅಡಿಗಳ ಎತ್ತರ ಹಾಗೂ 2 ಅಡಿ ಅಗಲ ಹಾಗೂ 4 ಅಡಿ ಉದ್ದವಿದ್ದು, 1 ಅಡಿ ದಪ್ಪವಿದ್ದು, ಅದ್ಭುತವಾಗಿವೆ.

## ಗಜ ಶಿಲ್ಪಗಳು

ಮುಂದುವರೆದು ಕೆಳಗೆ ಇಳಿಯುವ ದಾರಿಯಲ್ಲಿ ಎರಡು ಆನೆಗಳನ್ನು ಗಾಂಭೀರ್ಯ ನಡಿಗೆಯಲ್ಲಿರುವಂತೆ ಕೆತ್ತಲ್ಪಟ್ಟಿರುವುದು ಬಹಳ ಸುಂದರವಾಗಿವೆ, ಬಿಳಿ ಮಾರ್ಬಲ್ಲಿನಲ್ಲಿ ಕೆತ್ತಿರುವ ಈ ಎಲ್ಲಾ ಪ್ರಾಣಿಗಳ ಶಿಲ್ಪಗಳಿಗೆ.ಕಬ್ಬಿಣದ ಪಂಜರದ ರೀತಿಯ ಸರಳುಗಳನ್ನು ಅಳವಡಿಸಿರುವುದು ರಕ್ಷಣೆಗಾಗಿಯಾದರೂ, ಅವುಗಳ ಸೌಂದರ್ಯ ಸವಿಯಲು ಅಡ್ಡಿಪಡಿಸುತ್ತವೆ.

## ಶಿವಾಜಿ ಮಹಾರಾಜ

ಶಿವಾಜಿ ಮಹಾರಾಜನ ಶಿಲ್ಪವು ಅಮೃತ ಶಿಲೆಯಿಂದ ಮಾಡಲಾಗಿದೆ. ಈ ಶಿಲ್ಪವು ಮಹಾರಾಷ್ಟ್ರದ ಔಂದ್ ಸಂಸ್ಥಾನದ ರಾಜಾಶ್ರಯದಲ್ಲಿ ಇದ್ದಾಗ, ಬಿಡುವಿನ ವೇಳೆಯಲ್ಲಿ ಮಾಡಿದ್ದಾಗಿ ತಿಳಿದುಬರುತ್ತದೆ. ಇದರ ಎತ್ತರ 5 ಇಂಚು, ಅಗಲ 3 ಇಂಚು, ದಪ್ಪ 2 ಇಂಚು ಇದ್ದು, 1 ಇಂಚು ಪೀಠವಿದೆ. ಪೀಠವನ್ನು ವೃತ್ತಾಕಾರವಾಗಿ, ಒಂದೊಂದು ಹಂತವಾಗಿ ಮಾಡಲಾಗಿದೆ. ಇದು ಶಿವಾಜಿಯ ಭಾವಶಿಲ್ಪವಾಗಿದ್ದು ತಲೆಗೆ ಪೇಟ ರಚಿಸಲಾಗಿದೆ. ಕಣ್ಣು, ಮೂಗು, ಮೀಸೆ, ಗಡ್ಡ, ಕಿವಿ, ಓಲೆಯನ್ನು, ಕೊರಳಲ್ಲಿ ಆಭರಣ ಹಾಗೂ ರುದ್ರಾಕ್ಷಿ ವಸ್ತ್ರ ಧರಿಸಲಾಗಿದ್ದು ತುಂಬ ಭಾವಪೂರ್ಣವಾಗಿ ಶಿಲ್ಪವನ್ನು ಕೆತ್ತಲಾಗಿದೆ.

ವೀರಪ್ಪ ಕುಂಬಾರ ಅವರ ಕಲಾತ್ಮಕತೆಯ ಅಭಿವ್ಯಕ್ತತೆಯನ್ನು ಈ ಶಿಲ್ಪದಲ್ಲಿಯೂ ಕಾಣಬಹುದು.

**ಹನುಮಂತ**

ಈ ಕಲಾಕೃತಿಯು ಸಾಂಪ್ರದಾಯಿಕ ಶಿಲ್ಪವಾಗಿದ್ದು, ಅಮೃತ ಶಿಲೆಯಲ್ಲಿ ಮಾಡಲಾಗಿದೆ. ಶಿಲ್ಪವು ಮನಗೂಳಿಯ ವಿಠೋಬಾ ದೇವಸ್ಥಾನದಲ್ಲಿ ಸ್ಥಾಪನೆ ಮಾಡಲಾಗಿದೆ. ಈ ಶಿಲ್ಪದ ಎತ್ತರ 4 ಇಂಚು, ಅಗಲ 4 ಇಂಚು, ದಪ್ಪ $2^1/_2$ ಇಂಚು, ಪೀಠ 1 ಇಂಚು ಇದೆ. ಈ ಮೂರ್ತಿಯ ಮುಖದಲ್ಲಿ ಭಾವನೆಗಳು ಸ್ಪಷ್ಟವಾಗಿ ಹೊರಹೊಮ್ಮಿರುವಂತೆ ಶಿಲ್ಪಿಸಲಾಗಿದೆ.

ಹನುಮಂತನು ಕಿರೀಟಧಾರಿಯಾಗಿದ್ದು, ಕಿವಿಗಳಲ್ಲಿ ರುದ್ರಾಕ್ಷಿ ಇವೆ ಮತ್ತು ಕೊರಳಲ್ಲಿ ಆಭರಣ ಮಾಡಲಾಗಿದೆ, ಎಡಗೈಯಲ್ಲಿ ಗಧೆ ಇದೆ. ಬಲಗೈ ತೊಡೆಯ ಮೇಲೆ ಇಟ್ಟುಕೊಂಡಿರುವಂತೆ ರಚಿಸಲಾಗಿದ್ದು, ಪೀಠದ ಮೇಲೆ ಮಂಡಿ ಊರಿ ಕುಳಿತ ಹಾಗೆ ಇದೆ, ಟೊಂಕಕ್ಕೆ ವಸ್ತ್ರಧರಿಸಲಾಗಿದೆ. ಎರಡೂ ಕೈಗಳಿಗೆ ಬಳೆ ಹಾಕಲಾಗಿದ್ದು, ಹನುಮಂತನ ಗಾಂಭಿರ್ಯವನ್ನು ಹೆಚ್ಚಿಸಿವೆ. ಆಧ್ಯಾತ್ಮಿಕ ಭಾವನೆ ಸಾತ್ವಿಕ ಕಳೆ, ಭಕ್ತಿಭಾವಗಳು ಉಕ್ಕಿ ಬರುವಂತೆ ಮಾಡಲಾಗಿದೆ. ಈ ಮೂರ್ತಿಯಲ್ಲಿಯೂ ಸಹ ವೀರಪ್ಪ ಕುಂಬಾರ ಅವರು ಕಲಾತ್ಮಕತೆಯ ಅಭಿವ್ಯಕ್ತತೆಯನ್ನು ಬಹಳ ಚೆನ್ನಾಗಿ ತೋರಿಸಿದ್ದಾರೆ.

**ಅಂಬಾಭವಾನಿ**

ಭುವನೇಶ್ವರಿ ಅಥವಾ ಅಂಬಾಭವಾನಿಯ ಈ ಕಲಾಕೃತಿಯು ಸಾಂಪ್ರದಾಯಿಕ ಶಿಲ್ಪವಾಗಿದೆ. ಈ ಶಿಲ್ಪವು ಕಲಾವಿದನ ಮನೆಯಲ್ಲಿ ದಿನನಿತ್ಯ ಪೂಜೆಗೊಳ್ಳುತ್ತಿದೆ. ಇದರ ಎತ್ತರ $1^1/_2$ ಅಡಿ ಮತ್ತು ಅಗಲ 10 ಇಂಚು, ದಪ್ಪ 3 ಇಂಚು. ಈ ಶಿಲ್ಪವು ಕ್ಯಾಲೆಂಡರ್ ಶೈಲಿಯಲ್ಲಿದೆ. 3 ಇಂಚು ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿದೆ. ಚೂಪಾದ ಕಿರೀಟ, ಕಿವಿಯಲ್ಲಿ ಓಲೆ, ತಲೆಯ ಹಿಂದೆ ಚಕ್ರವಿದ್ದು, ಚತುರ್ಭುಜ ಹೊಂದಿದೆ. ನಾಲ್ಕು ಹಸ್ತಗಳಿದ್ದು, ಒಂದು ಬಲ ಹಸ್ತದಲ್ಲಿ ಖಡ್ಗ ಇದೆ, ಎಡ ಹಸ್ತದಲ್ಲಿ ಗುರಾಣಿ ಇದೆ. ಮೇಲಿನ ಎಡ-ಬಲ ಹಸ್ತಗಳು ಅಭಯ ಹಸ್ತವಾಗಿವೆ, ಡಮರುಗ ಹಿಡಿದಿದೆ, ಕೊರಳಲ್ಲಿ ಆಭರಣ ಮತ್ತು ಪೀತಾಂಬರ ಧರಿಸಿದೆ. ಪ್ರಭಾವಳಿಯ ಮಧ್ಯದಲ್ಲಿ ಕೀರ್ತಿಮುಖವಿದೆ, ಈ ಶಿಲ್ಪವು ಸುಂದರವಾಗಿದ್ದು, ಧಾರ್ಮಿಕತೆಯನ್ನು ಪ್ರತಿನಿಧಿಸಿದ್ದು, ಪೂಜಾರ್ಹ ಶಿಲ್ಪವಾಗಿದೆ.

## ಕೃಷ್ಣ ಶಿಲೆಯ ಶಿಲ್ಪಗಳು

### ಅಕ್ಕಯ್ಯ, ಜೋಗಯ್ಯ

ಈ ಶಿಲ್ಪಗಳು ಕರ್ನಾಟಕದ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ವಿಶಿಷ್ಟ ಪರಂಪರೆಯನ್ನು ಸೃಷ್ಟಿಸಿರುವ ಸೌದತ್ತಿ ಎಲ್ಲಮ್ಮ ಇಬ್ಬರು ಮಕ್ಕಳಾದ ಅಕ್ಕಯ್ಯ, ಜೋಗಯ್ಯರ ಶಿಲ್ಪಗಳಾಗಿದ್ದು, ಈ ಎರಡು ಶಿಲ್ಪಗಳು ಪೀಠದ ಮೇಲೆ ನಿಂತ ಭಂಗಿಯಲ್ಲಿವೆ. ಎರಡೂ ಶಿಲ್ಪಗಳ ಎತ್ತರ 3 ಅಡಿ, ಅಗಲ ಸರಾಸರಿ 2 ಅಡಿ ಇವೆ. ಅಕ್ಕಯ್ಯ, ಜೋಗಯ್ಯ ಈ ಎರಡೂ ಶಿಲ್ಪಗಳು ಹಸ್ತ ಮುದ್ರಿಕೆಯನ್ನು ಮೇಲೆತ್ತಿರುವಂತೆ ತೋರಿಸಲಾಗಿದೆ. ಋಷಿಮುನಿಗಳ ಸ್ವರೂಪಗಳ ಈ ಎರಡೂ ಶಿಲ್ಪಗಳ ಎಡಗೈಯಲ್ಲಿ ಕಮಂಡಲಗಳಿವೆ ತಲೆಯು ಮೇಲೆ ಜಟಾಧಾರಿಯಂತಿದ್ದು, ಎರಡು ಶಿಲ್ಪಗಳಲ್ಲಿಯೂ ಕೊರಳಲ್ಲಿ ಮೂರು ಎಳೆಯ ರುದ್ರಾಕ್ಷಿ ಸರಗಳನ್ನು ಧರಿಸಿರುವಂತೆ ಶಿಲ್ಪಿಸಲಾಗಿದೆ.

ಅಗಲವಾದ ಹಣೆ, ಹೊಳೆಯುವ ಕಣ್ಣುಗಳು ಅಂದವಾದ ಎರಡೂ ಶಿಲ್ಪಗಳಲ್ಲಿ ಆಧ್ಯಾತ್ಮಕತೆ ಎದ್ದು ಕಾಣುತ್ತದೆ. ಅಷ್ಟೇ ಅಲ್ಲದೆ ದೈವತ್ವದ ಸ್ವರೂಪವು ಇಲ್ಲಿದೆ, ಈ ಶಿಲ್ಪಗಳನ್ನು ತಾಳಮಾನದಲ್ಲಿ ಮತ್ತು ಅವುಗಳ ಶ್ರೇಷ್ಠತೆಯನ್ನು ಕಲಾವಿದ ತೋರಿಸಿದ್ದಾನೆ.

ವೀರಪ್ಪ ಕುಂಬಾರ ಅವರ ಕಲಾತ್ಮಕತೆಯ ಅಭಿವ್ಯಕ್ತತೆಯನ್ನು ಈ ಶಿಲ್ಪಗಳಲ್ಲಿಯೂ ಗ್ರಹಿಸಲಾಗಿದೆ.

### ಪರಶುರಾಮ

ಪರಶುರಾಮ ಶಿಲ್ಪ ಕಪ್ಪು ಕಲ್ಲಿನಲ್ಲಿ ಕೆತ್ತಲ್ಪಟ್ಟಿದ್ದು, ಇದು ಕ್ಯಾಲೆಂಡರ್ ಶೈಲಿಯಲ್ಲಿದೆ, ಇದು ಬಿಜಾಪುರ ಜಿಲ್ಲೆಯ ಮನಗೂಳಿ ಗ್ರಾಮದಲ್ಲಿ ಯಲ್ಲಮ್ಮನ ದೇವಸ್ಥಾನದ ಎದುರು ಪ್ರತಿಷ್ಠಾಪನೆ ಗೊಂಡಿದೆ.

ಇದರ ಎತ್ತರ 3 ಅಡಿ, ಅಗಲ 2 ಅಡಿ, ದಪ್ಪ 9 ಇಂಚು, 4 ಇಂಚು ಪೀಠದ ಮೇಲೆ ಸಮ ಭಂಗಿಯಲ್ಲಿ ನಿಂತಿರುವ ಭಂಗಿ ಮತ್ತು ಬಲಹಸ್ತದಲ್ಲಿ ಪರಶು (ಕೊಡಲಿ) ಇದೆ. ಕೊರಳಲ್ಲಿ ರುದ್ರಾಕ್ಷಿ ಧರಿಸಿ, ಜನಿವಾರದೊಂದಿಗೆ ಜನಪದ ಶೈಲಿಯ ಧೋತರವನ್ನು ಧರಿಸಿರುವ ಮತ್ತು ಎರಡೂ ಕೈಗಳಿಗೆ ರುದ್ರಾಕ್ಷಿ ಮತ್ತು ಕಿವಿಗೆ ರುದ್ರಾಕ್ಷಿ ಹೊಂದಿರುತ್ತದೆ. ಇವುಗಳಿಂದಾಗಿ ಈ ಕಲಾಕೃತಿಯು ಸುಂದರವಾಗಿ ಕಾಣಿಸುತ್ತದೆ. ಶಿಲ್ಪವು ತಾಳಮಾನ ಮತ್ತು ಅದರ ಪ್ರಬುದ್ಧತೆ, ಶ್ರೇಷ್ಠತೆಯನ್ನು ಕಾಪಾಡಿಕೊಂಡಿದೆ.

## ಜಮದಗ್ನಿ

ಈ ಶಿಲ್ಪವು ಜನಪದ ಶೈಲಿಯನ್ನು ಹೊಂದಿದ್ದು, ಕೃಷ್ಣಶಿಲೆಯಿಂದ ಕೆತ್ತಲಾಗಿದೆ. ಈ ಶಿಲ್ಪವು ಮನಗೂಳಿ ಗ್ರಾಮದಲ್ಲಿ ಪ್ರತಿಷ್ಠಾಪಿಸಲಾಗಿದೆ. ಇದರ ಎತ್ತರ 3 ಅಡಿ, ಅಗಲ $2^1/_2$ ಅಡಿ, ದಪ್ಪ 10 ಇಂಚು ಇದೆ, 4 ಇಂಚು ಪೀಠದ ಮೇಲ ಪದ್ಮಾಸನವನ್ನು ಹಾಕಿಕೊಂಡು ಕುಳಿತಿರುವ ಜಮದಗ್ನಿ, ಬಲ ಹಸ್ತದಲ್ಲಿ ಜಪಮಾಲೆ ಹಿಡಿದುಕೊಂಡಿದ್ದು, ಎಡ ಹಸ್ತವು ತೊಡೆಯ ಮೇಲೆ ಚಾಚಿರುತ್ತದೆ. ಜಮದಗ್ನಿಯು ಜಟಾಧಾರಿಯಾಗಿ, ಎರಡೂ ಕಿವಿಗಳಿಗೆ ರುದ್ರಾಕ್ಷಿ ಧರಿಸಿ, ಕೊರಳಿಗೆ ಮೂರು ಎಳೆಯ ರುದ್ರಾಕ್ಷಿ ಸರ ಮತ್ತು ಜನಿವಾರವನ್ನು ರೂಪಿಸಲಾಗಿದೆ.

ಈ ಶಿಲ್ಪಕ್ಕೆ ಪ್ರಭಾವಳಿಯು ಇದ್ದು, ಈ ಪ್ರಭಾವಳಿಯಲ್ಲಿ ಬಳ್ಳಿಗಳಿಲ್ಲ, ಆದರೂ ಈ ಶಿಲ್ಪ ಸುಂದರವಾಗಿ ಶ್ರೇಷ್ಠತೆಯನ್ನು ತೋರುತ್ತದೆ.

## ದ್ವಾರಪಾಲಕ

ಈ ಕಲಾಕೃತಿಯ ಸಂಪ್ರದಾಯಿಕ ಶೈಲಿಯನ್ನು ಒಳಗೊಂಡಿದ್ದು. ಕಪ್ಪುಕಲ್ಲಿನಲ್ಲಿ ಮಾಡಲಾಗಿದೆ. ಈ ಶಿಲ್ಪ ಮನಗೂಳಿ ಗ್ರಾಮದಲ್ಲಿ ಚರಂತಿಮಠದ ದ್ವಾರಬಾಗಿಲಲ್ಲಿ ಇದೆ.

ಇದರ ಎತ್ತರ $3\ ^1/_2$ ಅಡಿ ಇದೆ. ಹಾಗೂ ಇದರ ಅಗಲ $1\ ^1/_2$ ಅಡಿ ಇದೆ. ಇದು 3 ಇಂಚು ದಪ್ಪ ಇದೆ. ಇದು 1 ಅಡಿ ಪೀಠದ ಮೇಲೆ ನಿಂತಿದ್ದು, ಇದು ಉಬ್ಬು ಶಿಲ್ಪವಾಗಿ ಮಾಡಲಾಗಿದೆ. ಬಲಗಡೆ ತಲೆಯ ಮೇಲೆ ಕಿರೀಟ ಇದ್ದು. ಅದರ ಒಳಗೆ ಲಿಂಗವನ್ನು ಕೆತ್ತಲಾಗಿದೆ. ತಲೆಯಲ್ಲಿ ಕೇಶರಾಶಿ ಮತ್ತು ಕಣ್ಣು, ಮೂಗು, ತುಟಿ, ಎರಡೂ ಕಿವಿಯಲ್ಲಿ ಓಲೆ ಇದೆ. ಕೊರಳಲ್ಲಿ ಎರಡು ರುದ್ರಾಕ್ಷಿ ಸರ, ಲಿಂಗ ಇದೆ. ಹಾಗೂ ವಸ್ತ್ರಧರಿಸಲಾಗಿದೆ.

ಎಡ ಮತ್ತು ಬಲಗೈಯಲ್ಲಿ ಗಧೆಯನ್ನು ಹಿಡಿದುಕೊಳ್ಳಲಾಗಿದೆ. ಮತ್ತು ಸೊಂಟಕ್ಕೆ ವಸ್ತ್ರಧರಿಸಿದ್ದು, ಪಾದದಲ್ಲಿ ಯಾವುದೇ ಆಭರಣಗಳಿಲ್ಲ. ಇದು ಸಮಭಂಗಿಯಲ್ಲಿ ನಿಂತದ್ದಾಗಿದೆ. ದ್ವಾರಪಾಲಕನು ಕೃಷ್ಣನ ರೀತಿಯಲ್ಲಿ ನಿಂತಿರುತ್ತಾನೆ. ಈ ಶಿಲ್ಪಕ್ಕೆ ತೈಲವರ್ಣವನ್ನು ಹಚ್ಚಲಾಗಿದೆ. ಈ ಶಿಲ್ಪವು ದ್ವಾರ ಬಾಗಿಲಿಗೆ ಅಂಟಿಕೊಂಡಿರುತ್ತದೆ. ಜಾನಪದದ ಶಿಲ್ಪದಂತೆ ಅದರ ಮೈಲಕ್ಷಣಗಳನ್ನು ಹೊಂದಿರುವ ಕೃತಿ ನೋಡುಗರನ್ನು ಆಕರ್ಷಿಸುತ್ತದೆ.

### ಕಾಳಿಂಗ ಸರ್ಪ

ಈ ಕಲಾಕೃತಿಯು ಸಾಂಪ್ರದಾಯಿಕ ಶಿಲ್ಪವಾಗಿದೆ. ಕೃಷ್ಣ ಶಿಲೆಯಲ್ಲಿ ಕೆತ್ತಲಾಗಿದೆ. ಈ ಶಿಲ್ಪವು ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ ಮನಗೂಳಿ ಗ್ರಾಮದಲ್ಲಿ ಚರಂತಿಮಠ ಎಂಬ ಮಠದ ಮುಂಭಾಗದ ಒಂದು ಕಟ್ಟೆಯ ಮೇಲೆ ಪ್ರತಿಷ್ಠಾಪಿಸಲ್ಪಟ್ಟಿದೆ.

ಇದರ ಎತ್ತರ $3^1/_2$ ಅಡಿ, ಅಗಲ 2 ಅಡಿ ಇದೆ. ಇದರ ದಪ್ಪ $^3/_4$ ಅಡಿ ಇದೆ. $1^1/_2$ ಅಡಿ ಪೀಠದ ಮೇಲೆ ಈ ಶಿಲ್ಪವನ್ನು ಮಾಡಲ್ಪಟ್ಟಿದೆ. ಇದಕ್ಕೆ ಐದು ಹೆಡೆ (ತಲೆ) ಇದ್ದು, ಸುರಳಿ ಹಾಕಿ ಕುಳಿತಿರುವಂತೆ ರಚಿಸಲಾಗಿದೆ. ಮತ್ತು ಇದರ ಮೇಲೆ ಗೀರು ಹಾಕಲಾಗಿದೆ. ಇದರ ಹಿಂದೆ ಗಾರೆ (ಸಿಮೆಂಟ್) ಇದರಲ್ಲಿ ಪ್ರಭಾವಳಿಯನ್ನು ಮಾಡಿ ಅದರಲ್ಲಿ ಎಡ ಮತ್ತು ಬಲ ಎರಡೂ ಬದಿಯಲ್ಲಿ ಕಂಬ ಕೆತ್ತಲಾಗಿದೆ, ಎರಡೂ ಕಡೆ ಸಿಂಹವಿದ್ದು, ಸಿಂಹದ ಮೇಲೆ ನವಗ್ರಹಗಳನ್ನು ರಚಿಸಲಾಗಿದೆ. ಪ್ರಭಾವಳಿಯ ಮೇಲೆ ಕೀರ್ತಿಮುಖ ಮಾಡಲಾಗಿದ್ದು, ನವಗ್ರಹದ ಮಧ್ಯದಲ್ಲಿ ಸೂರ್ಯದೇವನನ್ನು ರಚಿಸಲಾಗಿದೆ. ಒಂದೇ ಚಕ್ರದ ರಥವನ್ನು ಮಾಡಿ, ರಥದ ಮೇಲೆ ಸೂರ್ಯದೇವನನ್ನು ರಚಿಸಲಾಗಿದೆ.

## ಗಾರೆ ಮಾಧ್ಯಮದ ಶಿಲ್ಪಗಳು

### ಸಾಯಿಬಾಬಾ

ಶಿಲ್ಪಕಲಾವಿದ ವೀರಪ್ಪನವರು ಈ ಕಲಾಕೃತಿಯನ್ನು ಸುಖಾಸನ ರೂಪದಲ್ಲಿ ರಚಿಸಿದ್ದಾರೆ. ಕುಂಬಾರರು ಅತ್ಯಂತ ಭಾವನಾತ್ಮಕವಾಗಿ ಕಲಾಕೃತಿಯನ್ನು ರಚನೆ ಮಾಡಿದ್ದು, ಈ ಶಿಲ್ಪವು ಬಿಜಾಪುರ ಮನಗೂಳಿ ಗ್ರಾಮದಲ್ಲಿ ಕಲಾವಿದನ ಮನೆಯಲ್ಲಿ ಇದ್ದು, ತಲೆಗೆ ಬಿಳಿ ವಸ್ತ್ರವನ್ನು ಸುತ್ತಿ ಕಟ್ಟಿದ್ದಾರೆ. ಹಾಗೂ ಬಿಳಿ ವಸ್ತ್ರದ ಅಂಗಿಯನ್ನು ಧರಿಸಿದ ಹಾಗೆ ಕಲಾವಿದರು ಕಲಾಕೃತಿಯನ್ನು ರಚಿಸಿದ್ದಾರೆ. ಒಟ್ಟಾರೆಯಾಗಿ ಈ ಶಿಲ್ಪವು ನೋಡಲು ಬಹಳ ಸುಂದರವಾಗಿದೆ.

### ಶ್ರೀ ಮಹಾಂತೇಶ ಪಟ್ಟಕಂಥಿ ಹಿರೇಮಠರ ಶಿಲ್ಪ

ಈ ಶಿಲ್ಪವು ವೀರಪ್ಪ ಕಂಬಾರವರ ಉತ್ತಮ ಕೃತಿಯಾಗಿದ್ದು, ಮನಗೂಳಿ ಗ್ರಾಮದ ಚರಂತಿಮಠದಲ್ಲಿ ಇದೆ. ಇದರ ಎತ್ತರ $2\ ^1/_2$ ಅಡಿ ಹಾಗೂ $1\ ^1/_2$ ಅಡಿ ಅಗಲವಿದ್ದು, ಸಿಂಹಾಸನದ ಮೇಲೆ ಕುಳ್ಳರಿಸಲಾಗಿದೆ. ಮುಖದ ಭಾವನೆ ಗಂಭೀರವಾಗಿದ್ದು, ತಲೆಗೆ ಕೆಂಪು ಬಟ್ಟೆಯ ರುಮಾಲನ್ನು ಸುತ್ತಿದ್ದಾರೆ, ಹಾಗೆಯೇ ಕಾವಿ ಬಟ್ಟೆಯನ್ನು ತೊಡಿಸಲಾಗಿದೆ. ಕೈಯಲ್ಲಿ ಬೆತ್ತದ ಕೋಲು ಹಿಡಿದಿದ್ದು, ಕಾಲಲ್ಲಿ

ಕಟ್ಟಿಗೆಯ ಪಾದರಕ್ಷೆ ಇದೆ, ಇವರು ಸತ್ತ ಮಗುವನ್ನು ಬದುಕಿಸಿದ ಕಥೆ ಇದೆ. ಈ ಸ್ವಾಮಿಗಳು ಪವಾಡಗಳನ್ನು ಮಾಡುತ್ತಿದ್ದುದನ್ನು ಇಲ್ಲಿ ಪ್ರತಿಪಾದಿಸಲಾಗಿದೆ. ಕಲಾವಿದರಾದ ವೀರಪ್ಪ ಕುಂಬಾರವರು ಈ ಕಲಾಕೃತಿಯನ್ನು ಗಾರೆಯಲ್ಲಿ ತಯಾರಿಸಿದ್ದಾರೆ. ಈ ಶಿಲ್ಪವನ್ನು ಬಹಳ ಆಕರ್ಷಕವಾಗಿ ರೂಪುಗೊಂಡಿದೆ.

### ರಾಮ ಲಕ್ಷ್ಮಣ ಸೀತಾ

ಈ ಶಿಲ್ಪವು ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲೂಕಿನ ಉತ್ನಾಳ ಗ್ರಾಮದಲ್ಲಿ ಇದೆ. ಹನುಮಂತ ದೇವ ದೇವಸ್ಥಾನದ ಮೇಲೆ ಮಾಡಲಾಗಿದೆ.

ಈ ಶಿಲ್ಪಗಳು ಸಮಭಂಗಿಯಲ್ಲಿ ನಿಂತಿರುತ್ತವೆ. ಇವುಗಳ ಎತ್ತರ 5 ಅಡಿ ಇದೆ. 8 ಅಡಿ ಅಗಲ ಮತ್ತು ಹಿಂದೆ ಪ್ರಭಾವಳಿ ಮಾಡಲಾಗಿದೆ. ಎಡ ಮತ್ತು ಬಲಬದಿಯಲ್ಲಿ ಕಂಬ ರಚಿಸಲಾಗಿದ್ದು, ಅದರ ಮೇಲೆ ಹುಲಿ ರಚಿಸಲಾಗಿದೆ. ಮತ್ತು ಪ್ರಭಾವಳಿಯ ಮೇಲೆ ಕೀರ್ತಿಮುಖ ರಚಿಸಲಾಗಿದೆ. ಮತ್ತು ಅದರ ಸುತ್ತಲೂ ನಕ್ಷೆಯ ವಿನ್ಯಾಸಗಳಿವೆ.

ರಾಮ ಲಕ್ಷ್ಮಣರ ಕೈಯಲ್ಲಿ ಬಿಲ್ಲು ಮತ್ತು ಬಾಣವಿದೆ. ಸೀತೆಯ ಕೈಯಲ್ಲಿ ಕಮಲದ ಹೂವು ಇದೆ. ಇವುಗಳ ತಲೆಯಲ್ಲಿ ಕಿರೀಟ ಕಿವಿಗಳಿಗೆ ಓಲೆ, ಭುಜದ ಮೇಲೆ ವಸ್ತ್ರ, ಕೊರಳಲ್ಲಿ ಆಭರಣ ಮತ್ತು ಪಂಚೆ (ಧೊತರ) ಧರಿಸಲಾಗಿದೆ. ಸೀತೆಯ ಕೈಗಳಿಗೆ ಬಳೆಗಳು, ಕೊರಳಲ್ಲಿ ಆಭರಣ ಮತ್ತು ಸೀರೆ ತೊಡಿಸಲಾಗಿದೆ. ಮತ್ತು ಕೆಳಗಡೆ ಇಬ್ಬರು ಸ್ತ್ರೀಯರನ್ನು ಚಿತ್ರಿಸಲಾಗಿದೆ. ಇವುಗಳಿಗೆ ರೆಕ್ಕೆ ಅಳವಡಿಸಿ, ಹಕ್ಕಿಗಳಂತೆ ಹಾರುವ ಹಾಗೆ ತೋರಿಸಲಾಗಿದೆ. ಕೈಯಲ್ಲಿ ಹಾರ (ಮಾಲೆ) ಹಿಡಿದುಕೊಂಡು ಹಾರುವಂತೆ ರಚಿಸಲಾಗಿದೆ.

ಈ ಶಿಲ್ಪಕಲಾಕೃತಿಯಲ್ಲಿ ಕಲಾವಿನ್ಯಾಸ ಸುಂದರವಾಗಿ ಕಾಣುತ್ತದೆ. ಈ ಶಿಲ್ಪವು ತಾಳಮಾನ ಮತ್ತು ಚಾಣಾಕ್ಷತನದಿಂದ ಕೂಡಿದ್ದು ಶ್ರೇಷ್ಠತೆಯನ್ನು ಹೊಂದಿದೆ. ಇದು 1968ರಲ್ಲಿ ರಚನೆಗೊಂಡಿದೆ.

### ಮಂಗಮಾಯಿ (ದೇವಿ)

ಈ ಶಿಲ್ಪವು ಮನಗೂಳಿಯಿಂದ 3 ಕಿ.ಮೀ. ದೂರದಲ್ಲಿ ಸ್ಥಾಪನೆಗೊಂಡಿದ್ದು, ರಾಮಣ್ಣ ಬಡಿಗೇರ ಎಂಬುವರ ತೋಟದಲ್ಲಿ ಸ್ಥಾಪನೆ ಆಗಿದೆ. ಈ ದೇವಿಯ ಶಿಲ್ಪವು ಪೌರಾಣಿಕ ಹಿನ್ನಲೆ ಹೊಂದಿದೆ. ಈ ದೇವಿಗೆ ನಾಲ್ಕು ಕೈ, ತಲೆಯಲ್ಲಿ ಕಿರೀಟ, ಕೊರಳಲ್ಲಿ ಆಭರಣ, ಹಾರ, ಎಡ ಮತ್ತು ಬಲ ಕೈಗಳಲ್ಲಿ ಖಡ್ಗ, ರಾಕ್ಷಸನ ರುಂಡ ಮುಂಡಿನ ಕೈಯಲ್ಲಿ ತ್ರಿಶೂಲ ರಾಕ್ಷಸನ ರುಂಡಕ್ಕೆ ಚುಚ್ಚಿರುವ ದೃಶ್ಯವನ್ನು ಇಲ್ಲಿ ಶಿಲ್ಪಿಸಲಾಗಿದೆ. ಮತ್ತು ಇದಕ್ಕೆ ಆಯಾ ವಸ್ತುಗಳಿಗೆ ಸಂಬಂಧಪಟ್ಟಂತೆ

ತೈಲವರ್ಣವನ್ನು ಲೇಪಿಸಲಾಗಿದೆ. ಕೆಳಗೆ ಹಸಿರುಬಳೆ ಮತ್ತು ಹಸಿರುವಸ್ತ್ರ ಸೀರೆ ಹಾಕಲಾಗಿದೆ. ಈ ದೇವಿಯ ವಾಹನ ಸಿಂಹ ಇದರ ಮೇಲೆ ಕುಳಿತಿರುವ ದೃಶ್ಯ ಮತ್ತು ದೇವಿಯ ಎಡ, ಬಲ, ಬದಿಯಲ್ಲಿ ಗಣೇಶ, ಮತ್ತು ಆಂಜನೇಯನನ್ನು ರಚಿಸಲಾಗಿದೆ. ಇದನ್ನು 1999ರಲ್ಲಿ ಸ್ಥಾಪಿಸಲಾಗಿದೆ.

**ಶಿವ, ಪಾರ್ವತಿ ಮತ್ತು ಗಣೇಶ**

ಈ ಶಿಲ್ಪವು ಕೂಡಾ ಮನಗೂಳಿ ಗ್ರಾಮದ ಚರಂತಿಮಠದ ಮೇಲೆ ರಚಿಸಲಾಗಿದೆ. ಈ ಕಲಾಕೃತಿಗಳಿಗೆ ಮಂಟಪ ಮಾಡಿ ಅದರಲ್ಲಿ ಇವುಗಳನ್ನು ನಿರ್ಮಿಸಿದ್ದಾರೆ. ಮಂಟಪದ ಮೇಲೆ ಸಣ್ಣ ಸಣ್ಣ ಕಮಾನುಗಳಲ್ಲಿ ಲಿಂಗಗಳನ್ನು ಇಡಲಾಗಿದೆ. ಮತ್ತು ಶಿವನ ಜಡೆಯಲ್ಲಿ ಗಂಗೆ ಮತ್ತು ಚಂದ್ರನನ್ನು ಮಾಡಲಾಗಿದೆ. ಕೊರಳಲ್ಲಿ ಹಾವು, ರುದ್ರಾಕ್ಷಿ, ವಸ್ತ್ರ, ಹಾರ ಮಾಡಲಾಗಿದೆ. ಮುಂದೆ ನಂದಿಯನ್ನು ರಚಿಸಲಾಗಿದೆ. ತೊಡೆಯ ಮೇಲೆ ಗಣೇಶನನ್ನು ರಚಿಸಲಾಗಿದೆ. ಇವುಗಳ ಕೆಳಗಿನ ಕಮಾನಿನಲ್ಲಿ ತಬಲಾ ವಾದ್ಯಗಳನ್ನು, ಮಧ್ಯದಲ್ಲಿ ಸರಸ್ವತಿಯನ್ನು ರಚಿಸಲಾಗಿದೆ. ದ್ವಾರಬಾಗಿಲ ಮೇಲೆ ಗಣೇಶ ಹಾಗೂ ಎಡ, ಬಲ, ಬದಿಯಲ್ಲಿ ಪಕ್ಷಿಗಳಂತೆ ಹಾರುತ್ತಿರುವ ಸ್ತ್ರೀಯರನ್ನು ರಚಿಸಲಾಗಿದೆ. ಇದನ್ನು 1962ರಲ್ಲಿ ಸ್ಥಾಪಿಸಿದ್ದಾರೆ.

**ಶಿವ ಮತ್ತು ನಂದಿಗಳು**

ಇಂಗಳೇಶ್ವರದ ಭೃಂಗೇಶ್ವರ ಮಠದ ಮೇಲ್ಛಾವಣಿಯಲ್ಲಿ ಈ ಕಲಾಕೃತಿಯು ರಚಿಸಲಾಗಿದೆ. ಶಿವನು ಸಮ ಭಂಗಿಯಲ್ಲಿ ಪದ್ಮಾಸನ ಹಾಕಿ ಕುಳಿತಿರುವಂತೆ ಮುಖದ ಭಾವವು ಪ್ರಶಾಂತತೆಯಿಂದ ಕೂಡಿದ್ದು, ಕಣ್ಣಿನ ದೃಷ್ಟಿ ನೇರವಾಗಿದೆ. ಮುಖದ ಮೇಲ್ಭಾಗದಲ್ಲಿ ಕೇಶಾಲಂಕಾರ ಜಟದಲ್ಲಿ ಅರ್ದ ಚಂದ್ರ, ಕಿವಿಗಳಿಗೆ ರುದ್ರಾಕ್ಷಿ, ಕೊರಳಲ್ಲಿ ರುದ್ರಾಕ್ಷಿ ಮಾಲೆ, ಕೈಗಳಿಗೆ ರುದ್ರಾಕ್ಷಿ ಸರಗಳನ್ನು ಕಟ್ಟಿದ್ದಾರೆ. ಬಲಗೈಯಲ್ಲಿ ಆಶೀರ್ವದಿಸಿದಂತೆ ಕಂಡು ಬರುತ್ತದೆ. ಎಡಗೈಯಲ್ಲಿ ಕಮಂಡಲ, ಕೆಳ ಬದಿಯಲ್ಲಿ ಹುಲಿಯ ಚರ್ಮದ ಮೇಲೆ ಕುಳಿತ ಭಂಗಿ ಇದೆ. ಇಲ್ಲಿ ಹಳದಿ ವರ್ಣವನ್ನು ಲೇಪಿಸಲಾಗಿದ್ದು, ಹುಲಿಯ ಮುಖವೊಂದನ್ನು ಚಿತ್ರಿಸಲಾಗಿದೆ.

ಶಿವನ ಮೈ ಬಣ್ಣವು ನೀಲಿ ವರ್ಣದಿಂದ ರೂಪಿಸಲಾಗಿದ್ದು, ಕಪ್ಪು ವರ್ಣದ ರುದ್ರಾಕ್ಷಿ ಎಡ ಮತ್ತು ಬಲ ಬದಿಯಲ್ಲಿ ನಂದಿಗಳನ್ನು ರಚಿಸಲಾಗಿದೆ. ಅವು ಮಂಡಿಗಾಲನ್ನು ಊರಿ ಕುಳಿತಿರುವಂತೆ, ಇವುಗಳ ಮೈಬಣ್ಣ ಬಿಳಿದಾಗಿದೆ. ಬೆನ್ನಿನ ಮೇಲೆ ನೀಲಿ ವರ್ಣದ ವಸ್ತ್ರ ಇವುಗಳ ಕೊರಳಿಗೆ ಹಳದಿ ಮತ್ತು ಕೆಂಪು ವರ್ಣದ ಹಾರಗಳನ್ನು ಮಾಡಲಾಗಿದೆ.

ಹಿನ್ನೆಲೆಯಲ್ಲಿ ಹಳದಿ ವರ್ಣವನ್ನು ಲೇಪನ ಮಾಡಿರುವ ಪ್ರಭಾವಳಿ ಮೇಲೆ ಬಿಳಿ, ನೀಲಿ, ಕೆಂಪು ವರ್ಣಗಳನ್ನು ಮಿಶ್ರ ಮಾಡಲಾಗಿದೆ. ಮೇಲೆ ಕೀರ್ತಿ ಮುಖಮಾಡಲಾಗಿದ್ದು. ಇವುಗಳ ಎತ್ತರ 3 ಅಡಿ, 2 ಅಡಿ ಅಗಲ ಪ್ರಭಾವಳಿ ಎತ್ತರ $3^1/_2$ ಅಡಿ, ಅಗಲ 8 ಅಡಿ ಇದೆ.

### ಶ್ರೀ ಸಂಗನ ಬಸವ ಶಿವಾಚಾರ್ಯರು

ಈ ಪೂರ್ಣಭಾವ ಕಲಾಕೃತಿಯ ಎತ್ತರ 3 ಅಡಿ, ಅಗಲ 2 ಅಡಿ, ದಪ್ಪ 1 ಅಡಿ. ಈ ಶಿಲ್ಪವು ಸಮ ಭಂಗಿಯಲ್ಲಿ ಕುಳಿತಿರುತ್ತದೆ. ಮುಖದ ಭಾವವು ಶಾಂತಸ್ವರೂಪವಾಗಿದ್ದು, ತಲೆಯ ಭಾಗದಲ್ಲಿ ಕೇಶವನ್ನು ಸುತ್ತಿ ಅದಕ್ಕೆ ರುದ್ರಾಕ್ಷಿ ಸರವನ್ನು ಸುತ್ತಲಾಗಿದೆ. ಅದರ ಮೇಲೆ ವಸ್ತ್ರದಿಂದ ಅಲಂಕರಿಸಿದೆ. ಮುಖದಲ್ಲಿ ಉದ್ದನೆಯ ಕೇಶವನ್ನು ರೂಪಿಸಲಾಗಿದೆ.

ಕೊರಳಲ್ಲಿನ ರುದ್ರಾಕ್ಷಿ ಮಾಲೆಯ ಮೇಲೆ ಇವರ ಗುರುವಾದ ಮಹಾಂತೇಶ್ವರ ಸ್ವಾಮಿಗಳ ಶಿರಭಾವವನ್ನು ಮಾಡಲಾಗಿದೆ. ಬಲ ಹಸ್ತವನ್ನು ಆಶೀರ್ವದಿಸುವ ರೀತಿ ಇದೆ. ಎಡ ಹಸ್ತವು ತೊಡೆಯ ಮೇಲೆ ಇಟ್ಟಿರುವಂತೆ, ತೊಡೆಗೆ ಓರಗಿರುವಂತೆ ಕೋಲನ್ನು ರೂಪಿಸಿದೆ. ಈ ಕಲಾಕೃತಿಯನ್ನು ಗಾರೆ ಮಾಧ್ಯಮದಲ್ಲಿ ರಚಿಸಿದ್ದಾರೆ.

## ಮಣ್ಣಿನ ಮಾಧ್ಯಮದ ಶಿಲ್ಪಗಳು

### ಮಣ್ಣೆತ್ತು ಬಸವಣ್ಣ

ವೀರಪ್ಪ ಕುಂಬಾರರ ಮಣ್ಣೆತ್ತು ಬಸವಣ್ಣಗಳೂ ಆರಾಧನೆಗಾಗಿ ಹೆಚ್ಚು ಪ್ರಸಿದ್ಧಗೊಂಡಿದ್ದವು. ಅಮವಾಸ್ಯೆಯ ದಿನಗಳಲ್ಲಿ ಇವುಗಳ ಬೇಡಿಕೆಯು ಹೆಚ್ಚಾಗಿರುತ್ತಿತ್ತು. ಜೇಡಿ ಮಣ್ಣಿನಿಂದ ತಯಾರಿಸಿ, ಬಿಳಿ ಹಾಗೂ ಹೊಳೆಯುವ ಚಿನ್ನದ ಬಣ್ಣವನ್ನು ಕೊಂಬುಗಳಿಗೆ ಬಳಿದು, ಆಕರ್ಷಕವಾದ ಸರಳ ಶೈಲಿಯಲ್ಲಿ ಸೃಷ್ಟಿಸಿ, ಕೈಚಳಕ ತೋರುತ್ತಿದ್ದರು. ಈ ವೃತ್ತಿಯಲ್ಲಿ ಇವರ ಕುಟುಂಬದವರು ಇಂದಿಗೂ ಮುಂದುವರಿದಿದ್ದಾರೆ.

### ಗೌರಿ

ಈ ಕಲಾಕೃತಿಯನ್ನು ಕಲಾವಿದರಾದ ಈರಪ್ಪ ಕುಂಬಾರವರು ರಚಿಸಿದ್ದಾರೆ. ಈ ಶಿಲ್ಪವು ಮನಗೂಳಿ ಗ್ರಾಮದ ಚರಂತಿ ಮಠದಲ್ಲಿ ಇದೆ. ಇದರ ಎತ್ತರವು $2^1/_2$ ಅಡಿ ಇದ್ದು, $1\ ^1/_2$ ಅಡಿ ಹಾಗೂ ದಪ್ಪ 1 ಅಡಿ ಅಗಲ ಇದೆ. ಮುಖದ ಭಾವವು ಶಾಂತಯುತವಾಗಿದ್ದು ಕಿರೀಟ ಧಾರಣಿಯಾಗಿದ್ದಾಳೆ. ಕಿವಿಯಲ್ಲಿ ಓಲೆ

ಹಾಗೂ ಕೊರಳಲ್ಲಿ ಗುಂಡಿನ ಸರ ಧರಿಸಿದ್ದು, ತೊಡೆಯ ಮೇಲೆ ಪುತ್ರನಾದ ಗಣೇಶ ಆಸೀನನಾಗಿದ್ದಾನೆ. ಎಡಗಡೆ ಗಣೇಶನ ವಾಹನವಾದ ಮೂಷಿಕವು ಎರಡು ಕೈಎತ್ತಿ ನಮಸ್ಕರಿಸುವಂತೆ ರಚನೆ ಮಾಡಿದ್ದಾರೆ. ನಂತರ ಬಲಭಾಗದಲ್ಲಿ ದೇವಿಯ ವಾಹನವಾದ ಸಿಂಹವನ್ನು ಉಗ್ರರೂಪದಲ್ಲಿ ರಚಿಸಿದ್ದಾರೆ. ಜಿಂಕೆಯ ಶಿಲ್ಪವು ದೇವಿಯ ವಾಹನವನ್ನು ನೋಡುವಂತೆ ಕಲಾಕೃತಿಯನ್ನು ರಚಿಸಲಾಗಿದೆ. ದೇವಿಯು ಒಂದು ಬಂಡೆಯ ಮೇಲೆ ಆಸೀನಳಾಗಿದ್ದಾಳೆ. ಒಟ್ಟಾರೆಯಾಗಿ ದೇವಿಯ ವಿಗ್ರಹವು ಅತ್ಯಂತ ಭಾವನಾತ್ಮಕವಾಗಿ ಕಲಾವಿದರು ಇಲ್ಲಿ ರಚನೆ ಮಾಡಿದ್ದಾರೆ.

### ನಂದಿ ಶಿಲ್ಪ

ಕಲಾವಿದರಾದ ಕುಂಬಾರವರು ಶಿಲ್ಪದ ರಚನೆಯಲ್ಲಿ ಎತ್ತಿದ ಕೈ ಶಿವನ ವಾಹನವಾದ ನಂದಿಯನ್ನು ಭಾವನಾತ್ಮಕವಾಗಿ ಮಲಗಿರುವಂತೆ ಇಲ್ಲಿ ರಚನೆ ಮಾಡಿದ್ದಾರೆ. ಮುಖದ ಭಾವವು ಗಂಭೀರವಾಗಿದ್ದು, ಕೊರಳಲ್ಲಿ ಗಂಟೆಯ ಹಾರಗಳನ್ನು ರಚಿಸಿದ್ದಾರೆ. ಈ ಶಿಲ್ಪದ ಕಾಲುಗಳು ಮುರಿದಿದ್ದು, ಇದು ಶಿಲ್ಪಕಲಾವಿದರ ಮನೆಯಲ್ಲಿ ಇದೆ. ಇದರ ಅಗಲ 2 ಅಡಿ ಇದ್ದು ಎತ್ತರ 2 ಅಡಿ ಹಾಗೂ ದಪ್ಪ 1 ಅಡಿ ಇದೆ.

### ಶಿವ

ಈಶ್ವರನ ಈ ವಿಗ್ರಹವನ್ನು ಕಲಾವಿದರಾದ ವೀರಪ್ಪ ಕುಂಬಾರವರು ಉಬ್ಬುಶಿಲ್ಪದ ಶೈಲಿಯಲ್ಲಿ ಮಾಡಿದ್ದಾರೆ. ಶಿವನು ತಪಸ್ಸಿಗೆ ಕುಳಿತ ಹಾಗೆ ರಚಿಸಲಾಗಿದೆ. ಜಟಾಧರನಾದ ಶಿವನು ಕೊರಳಲ್ಲಿ ಸರ್ಪವನ್ನು ಧರಿಸಿಕೊಂಡಿದ್ದು, ಮುಂದಿನ ಎರಡು ಕೈಗಳಲ್ಲಿ ನಾಗ ಬಂಧವನ್ನು ಧರಿಸಿದ್ದು, ಹಿಂದಿನ ಬಲಗೈಯಲ್ಲಿ ತ್ರಿಶೂಲವನ್ನು, ಎಡಗೈಯಲ್ಲಿ ಡಮರುಗವನ್ನು ಹಿಡಿದಿದ್ದಾನೆ. ಹುಲಿಯ ಚರ್ಮದ ಮೇಲೆ ಆಸೀನನಾದ ಶಿವನು ಶಾಂತಸ್ವರೂಪನಾಗಿದ್ದು, ಮುಂದೆ ಕಮಂಡಲವನ್ನು ಇಡಲಾಗಿದೆ. ಹಿಂದೆ ಪ್ರಭಾವಳಿಯಲ್ಲಿ ಸುರಳಿಯ ಚಿತ್ರಣವನ್ನು ಕಲಾವಿದರು ರಚನೆ ಮಾಡಿದ್ದಾರೆ. ಈ ಕಲಾಕೃತಿಯು ಕಲಾವಿದರ ಮನೆಯಲ್ಲಿ ಇದೆ.

### ರೂಪದರ್ಶಿ (ಭಾವಶಿಲ್ಪ)

ಸುಂದರಿಯಾದ ಈ ರೂಪದರ್ಶಿ ಮುಖದ ಭಾವ ನೇರವಾಗಿ ನೋಡುತ್ತಿರುವುದಾಗಿ ಕಾಣುತ್ತದೆ. ಸುಮಾರು 4.5 ದಶಕದ ಮೊದಲೇ ರಚಿಸಿದ್ದು, ಮುಖದ ಭಾವನೆ ಮುಗುಳ್ನಗೆ ಹೊಂದಿರುವುದನ್ನು ಬಹುದಾಗಿದೆ. ಅಲ್ಲದೆ ವರ್ಣ ಲೇಪನವು ಕೂಡ ಶಿಲ್ಪದಲ್ಲಿ ಕಂಡುಬರುತ್ತದೆ. ಮುಖಕ್ಕೆ ತಕ್ಕಂತೆ ವರ್ಣಲೇಪನ ಮಾಡಲಾಗಿದೆ. ಕಣ್ಣು, ಹುಬ್ಬು, ತಲೆಯ ಬೈತಲೆಯು ದಟ್ಟ ಕೆಂಪು ಬಣ್ಣದ ಲೇಪನವಿದ್ದು, ಉಳಿದ ಮುಖದ ಭಾಗವು ಚಿನ್ನದ ವರ್ಣದಿಂದ ಕೂಡಿದೆ.

ಸದ್ಯದಲ್ಲಿ ಈ ಒಂದು ಶಿಲ್ಪವು ಹೆಚ್ಚಿನ ಪ್ರಮಾಣದಲ್ಲಿ ನಶಿಸುತ್ತಿರುವುದು ಕಂಡು ಬರುತ್ತದೆ. ಪ್ರಸ್ತುತ ಶಿಲ್ಪವು ಕಲಾವಿದರ ಇವರ ಮನೆಯಲ್ಲಿದೆ.

**ಶ್ರೀ ಮಹಾಂತೇಶ್ವರ ಸ್ವಾಮಿಯವರು**

ಈ ಕಲಾಕೃತಿಯ ಮುಖದ ಭಾವವು ಶಾಂತತೆಯಿಂದ ಕೂಡಿದ್ದು ಕಣ್ಣಿನ ದೃಷ್ಠಿ ನೇರವಾಗಿದೆ, ತಲೆ ಭಾಗದಲ್ಲಿ ತಿಳಿ ಹಳದಿ ವರ್ಣದ ಪೇಟ ರೂಪಿಸಲಾಗಿದ್ದು, ಮೈ ಮೇಲೆ ತಿಳಿ ಹಳದಿ ವರ್ಣದ ವಸ್ತ್ರವನ್ನು ರಚಿಸಿದ್ದಾರೆ. ಬಲಗೈಯಲ್ಲಿ ಕೋಲು ಹಿಡಿದಿದ್ದು, ಎಡಗೈ ಸಿಂಹಾಸನದ ಮೇಲೆ ಇಡಲಾಗಿದೆ. ಕಾಲುಗಳನ್ನು ಸ್ವಲ್ಪ ಮುಂದೆ ಚಾಚಿದ್ದು, ಕೆಳಗೆ ಪಾದುಕೆ ಹಾಕಿದೆ, ಸಿಂಹಾಸನವು ಬೆಳ್ಳಿ ವರ್ಣದಿಂದ ಲೇಪನವಾಗಿದೆ.

ತಲೆಗೆ ಕೆಂಪು, ಹಳದಿ, ಕಪ್ಪು ವರ್ಣದ ಪೇಟ ರಚಿಸಲಾಗಿದೆ. ಈ ಕಲಾಕೃತಿಯನ್ನು ಮಣ್ಣಿನಲ್ಲಿ ಮಾಡಲಾಗಿದ್ದು ನಂತರ ತೈಲವರ್ಣವನ್ನು ಲೇಪನ ಮಾಡಲಾಗಿದೆ. ಈ ಕಲಾಕೃತಿಯು ಕಲಾವಿದರ ಮನೆಯಲ್ಲಿ ಸಂಗ್ರಹವಾಗಿದೆ.

ಇದರ ಎತ್ತರ $1^1/_2$ ಅಡಿ, ಅಗಲ $5^1/_2$ ಇಂಚು, ದಪ್ಪ 9 ಇಂಚು, ಪೀಠದ ಸುತ್ತಳತೆಯ 8 ಇಂಚು ಇದೆ. ಹೀಗೆ ಕಲಾವಿದರು ಬಹಳ ಸುಂದರವಾಗಿ ಶಿಲ್ಪಕಲಾ ಕೃತಿಯನ್ನು ರಚನೆ ಮಾಡಿದ್ದಾರೆ. ತಮ್ಮ ಕೃತಿ ಕೌಶಲ್ಯದಿಂದ ವಿಶಿಷ್ಟವಾದ ಶಿಲ್ಪಗಳನ್ನು ಸೃಷ್ಟಿಸಿ, ಶಿಲ್ಪ ಕ್ಷೇತ್ರಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದ್ದಾರೆ.

# ಬಾಲ್ಯ ಮತ್ತು ಜೀವನ

ವೀರಪ್ಪ ಕುಂಬಾರರು 1905ರಲ್ಲಿ ಬಿಜಾಪುರ ಜಿಲ್ಲೆಯ ನಾಗರಾಳ ಎಂಬ ಗ್ರಾಮದಲ್ಲಿ ಕಲಾ ಕುಸುಮವಾಗಿ ಜನಿಸಿದರು. ಮನೆತನದ ವೃತ್ತಿ ಕುಂಬಾರಿಕೆ, ತಂದೆಯ ಹೆಸರು ಎಲ್ಲಪ್ಪಾ, ತಾಯಿಯ ಹೆಸರು ಗಿರಿಜೆವ್ವಾ, ವೀರಪ್ಪನ ಅಕ್ಕನ ಹೆಸರು ಗಂಗವ್ವ, ಪ್ಲೇಗ್ ಬೇನೆಯಲ್ಲಿ 3 ಜನ ತಂಗಿಯರನ್ನು ಕಳೆದುಕೊಂಡು ಬೆಳೆದವರು. ಎಂಟು ವರ್ಷದವರಿದ್ದಾಗ ತಂದೆ–ತಾಯಿಯರನ್ನು ಕಳೆದುಕೊಂಡವರು. ಕೇವಲ ಮೂರನೇ ತರಗತಿಯವರೆಗೆ ಮರಾಠಿ ಓದಿದ ಅವರ ಕುಟುಂಬದ ನಿರ್ವಹಣೆ ಕಷ್ಟದಾಯಕವಾಗಿತ್ತು. ಆಗಲೇ ಅಕ್ಕನಿಗೆ ಕೋಟ್ಯಾಳದ ಬರ್ಮಪ್ಪ ಕುಂಬಾರ ಎಂಬ ಇನ್ನೊಬ್ಬ ಹುಟ್ಟು ಕಲಾವಿದನ ಜೊತೆ ಮದುವೆ ಆಯಿತು. ಅಕ್ಕನಿದ್ದಲ್ಲಿಗೆ ತಮ್ಮನು ಹೋದ. ಕೋಟ್ಯಾಳದಲ್ಲಿ ಮಾವ ಅಳಿಯ ಸೇರಿ ಮಣ್ಣಿನ ಮಾಧ್ಯಮದಲ್ಲಿ ಜಾನಪದ ಶೈಲಿಯ ಎತ್ತು, ಎಮ್ಮೆ, ನಾಯಿ, ಗೌರಿ, ಗಣಪತಿ, ಗುಳ್ಳವ್ವ ಮುಂತಾದವುಗಳನ್ನು ರಚನೆ ಮಾಡಿ ಮಾರುತ್ತಿದ್ದರು. ಹಣಕ್ಕಾಗಿ ಯಾರು ಖರೀದಿಸುತ್ತಿರಲಿಲ್ಲಾ ಬದಲಾಗಿ ಜೋಳ, ಸಜ್ಜಿ, ಅವರೇಕಾಳು, ಹೆಸರು ಕಾಳು ಇಂತಹ ದವಸ ಧಾನ್ಯಗಳನ್ನು ನೀಡುತ್ತಿದ್ದರು. ಅವುಗಳನ್ನು ತಂದು ಕುದಿಸಿ ತಿಂದು ಮತ್ತೆ ಮಣ್ಣಿನ ಕೆಲಸಕ್ಕೆ ಕೈಗೂಡುತ್ತಿದ್ದರು.

ಶಿಲ್ಪಕಲೆ ಅಂದರೆ ಸಾಮಾನ್ಯವಾಗಿ ಕಲ್ಲು, ಮಣ್ಣು, ಕಟ್ಟಿಗೆ, ರಬ್ಬರ್, ಪ್ಲಾಸ್ಟಿಕ್, ಸಿಮೆಂಟ್‌ನಂತಹ ಮಾಧ್ಯಮದಲ್ಲಿ ತಯಾರಿಸಿದ ಕೃತಿ, ಅಂದರೆ ಮುಟ್ಟಿ ಅನುಭವಿಸಬಹುದಾದಂತಹ ಸ್ಪರ್ಶಾನುಭವಿರುವಂತಹದ್ದು, ಆಯ್ದ ಮಾಧ್ಯಮಗಳಿಂದ ಕೆತ್ತುವಿಕೆ, ಮೆತ್ತುವಿಕೆಯಿಂದ ಆಕೃತಿಯನ್ನು ಪೂರ್ಣಗೊಳಿಸಿದಾಗ ಶಿಲ್ಪ ಸೃಷ್ಟಿಯಾಗುವುದು. ಇವುಗಳ ಗಂಧವೇ ಗೊತ್ತಿರದ ವೀರಪ್ಪ ಮಾವ ಭರ್ಮಣ್ಣ ತಮಗೆ ಕೊಟ್ಟಿದ್ದನ್ನು ಮಡಿಕೆ ಮಣ್ಣಿನಲ್ಲಿ ಮಾಡಿ ನೆರಳಲ್ಲಿ ಒಣಗಿಸಿ, ಕೆಲವೊಂದನ್ನು ಬಿಟ್ಟು ಕೆಲವೊಂದನ್ನು ಸುಟ್ಟು, ಸ್ಥಳೀಯ ಹುಡಿ ಬಣ್ಣಗಳನ್ನೇ ಬಳಸಿ ಸೌಂದರ್ಯ ತುಂಬುತ್ತಿದ್ದರು.

ತ್ರಿಮಾನಗಳಿಂದ ಕೂಡಿದ ಶಿಲ್ಪ, ಕಲಾ ರಸಿಕನನ್ನು ಆಕರ್ಷಣೆ ಮಾಡಿಕೊಂಡು ವಿಶೇಷವಾದ ದೃಶ್ಯಾನುಭವ ನೀಡುತ್ತದೆ ಎಂಬ ಸೂತ್ರ ಅವರಿಗೆ  ಅರಿವಾಗಿತ್ತು.

ಇಬ್ಬರೂ ಎಲ್ಲೂ ಕಲಾ ಶಿಕ್ಷಣವಾಗಲಿ, ಹೆಚ್ಚಿನ ಅಕ್ಷರಾಭ್ಯಾಸವಾಗಲೀ ಪಡೆದವರಲ್ಲ. ಆ ಶಕ್ತಿಯೂ ಅವರಿಗಿರಲಿಲ್ಲ. ಹೊಟ್ಟೆ ಹೊರೆದುಕೊಳ್ಳಲು ಇವರು ಹಿಡಿದ ದಾರಿ ಚಿತ್ರ, ಶಿಲ್ಪ ರಚನೆ ಮಾಡುವ ಕೆಲಸ, ದೈವದತ್ತವಾಗಿ ಬಂದಂತಹ ಈ ವಿದ್ಯೆಯಲ್ಲಿ ತಲ್ಲೀನರಾಗಿ ಕೆಲಸ ಮಾಡುತ್ತಿದ್ದರು. ನಿರ್ಮಿಸಿದ ಮೂರ್ತಿಗಳನ್ನು ಜನ ಕೇಳಿದ ಬೆಲೆಗೆ ಕೊಟ್ಟು, ಬಂದುದ್ದರಲ್ಲೇ ತಿಂದು ಜೀವನ ಸಾಗಿಸುವುದು, ಇದು ಬಾಲ್ಯದ ದಿನಚರಿ. ಬರಬರುತ್ತಾ ಕೈಪಳಗಿದಂತೆ ಮೂರ್ತಿಗಳಲ್ಲಿ ವಿಶೇಷ ಸೌಂದರ್ಯ ಮೂಡತೊಡಗಿತು. ವ್ಯಕ್ತಿಯ ಭಾವನೆಗಳನ್ನು ಶಿಲ್ಪದಲ್ಲಿ ತೋರಿಸಲು ಪ್ರಯತ್ನಿಸಿದ ಮೊದಲು ಕಲಾವಿದ ಲ್ಯಾಸಿಪಸ್ ಎಂಬ ವಿಚಾರ ವೀರಪ್ಪ ಅಂದೇ ತಿಳಿದಿದ್ದರು. ಪ್ರಮಾಣ ಬದ್ಧತೆಯನ್ನು ಗುರುತಿಸಿ ಸೌಂದರ್ಯ ಸರಿಗಟ್ಟುತ್ತಿದ್ದ, ಎಂದರೆ ಅತಿಶಯೋಕ್ತಿಯಲ್ಲ. ಈ ಮಾತನ್ನು ಖಾತ್ರಿ ಮಾಡಿಕೊಳ್ಳಬೇಕಾದರೆ, ವೀರಪ್ಪ ಕೆತ್ತಿ ನಿಲ್ಲಿಸಿದ ಮಹಾರಾಷ್ಟ್ರದ ಕಿರ್ಲೋಸ್ಕರ ವಾಡೆಯಲ್ಲಿನ ಕಿರ್ಲೋಸ್ಕರ ಹೆಂಡತಿ ಹೂದಾನಿ ಹಿಡಿದುಕೊಂಡು ಪೂಜೆಗೆ ಹೊರಟು ನಿಂತ ಆಳೆತ್ತೆರದ ಕಪ್ಪು ಮಾರ್ಬಲಿನ ಮೂರ್ತಿ ಮತ್ತು ಜಾತದ ಮ್ಯೂಸಿಯಂದಲ್ಲಿನ ನೂರಾರು ಮೂರ್ತಿಗಳನ್ನು ನೋಡಿದರೆ ಸಾಕು.

ಈ ಜೀವನಕ್ಕೂ ಮೀರಿದ ಕಲಾ ಜೀವನಕ್ಕೆ ಪರಿವರ್ತನೆ ಆಗುವ ಬಯಕೆಯು ಇವರಲ್ಲಿ ಮೂಡಿಬಂದು, ನಂತರದಲ್ಲಿ ಸೊಲ್ಲಾಪುರದ ಲಕ್ಷ್ಮೀದೇವಾಲಯದ ಬಳಿ ಚಿತ್ರಕಾರ ಕುಟೀರವನ್ನು ಭರಮಪ್ಪ ಕೋಟ್ಯಾಳಕರರ ನೇತೃತ್ವದಲ್ಲಿ ಸಾಗಿಸುತ್ತಿದ್ದಾಗ, ಇವರ ಕಲಾಕೃತಿಗಳಿಗೆ ಮಾರು ಹೋದ ಹಲವಾರು ಜನ ತಮ್ಮ ಮಕ್ಕಳಿಗೆ ಚಿತ್ರಬಿಡಿಸುವುದನ್ನು ಕಲಿಯಲು ಭರಮಪ್ಪನವರ ಬಳಿ ಕಳುಹಿಸುತ್ತಿದ್ದರು. ಈ ಸಂದರ್ಭದಲ್ಲಿ ವೀರಪ್ಪನವರು ಕೂಡ ದೇಹರಚನೆ, ಹಾವಬಾವ, ಸೂಕ್ಷ್ಮರಚನೆಗಳನ್ನು ಕೈಗೂಡಿಸಿಕೊಂಡರು. ಭರಮಪ್ಪನವರು ಸಿನಿಮಾ ಮಂದಿರಗಳ ಭಿತ್ತಿಚಿತ್ರ (ಪೋಸ್ಟರ್ಸ್)ಗಳನ್ನು ಬರೆದು ಕೊಡುತ್ತಿದ್ದಾಗ, ಕುಂಬಾರರು ಪುಕ್ಕಟೆ ಸಿನಿಮಾಗಳಿಂದ ಮನರಂಜನೆ ಅನುಭವಿಸಿದ್ದುಂಟು. ನಾಟಕಗಳ ರಂಗ ಪರದೆಗಳನ್ನು ಬಾವ ಚಿತ್ರಿಸುತ್ತಿದ್ದಾಗ ಅವುಗಳಿಂದ ಪುರಾಣ ಕಥೆಗಳ ಪಾತ್ರಧಾರಿಗಳ ಬಗ್ಗೆ ಆಸಕ್ತಿಯನ್ನು ತೋರಿ ಚಿತ್ರಕಥಾನಕಗಳನ್ನು ಚಿತ್ರಿಸುವಲ್ಲಿ ತಲ್ಲೀನಾರಾಗಿ ಕೈಚಳಕವನ್ನು ಪಳಗಿಸಿಕೊಂಡರು. ಈ ಸಂದರ್ಭದಲ್ಲಿ ಒಬ್ಬ ಛಾಯಾಚಿತ್ರಕಾರನ ಪರಿಚಯವಾಗಿ ಆತನಿಗೆ ಗುತ್ತಿಗೆ ಆಧಾರದಲ್ಲಿ ಕಲಾಕೃತಿಗಳನ್ನು ಭಾವ ಭರಮಪ್ಪ ರಚಿಸಿಕೊಡುತ್ತಿದ್ದ ಸಂದರ್ಭದಲ್ಲಿ, ಆತ ಕಲಾಕೃತಿಗಳ ಮೇಲೆ ತನ್ನ ಹೆಸರನ್ನು ನಮೂದಿಸಿಕೊಂಡು ಹೆಚ್ಚಿನ ಬೆಲೆಗೆ ಮಾರಾಟ ಮಾಡುತ್ತಿದ್ದ. ಈ ವಂಚನೆ ಬಹಿರಂಗಗೊಳ್ಳಲು ಬಹಳ ದಿನ ಬೇಕಾಗಲಿಲ್ಲ. ಈ ಸಂದರ್ಭದಲ್ಲಿ ನಾಟಕೀಯ ರೀತಿಯಲ್ಲಿ ಔಂದ್ ಮಹಾರಾಜ

ಶ್ರೀ ಬಾಳಸಾಹೇಬರ ಪರಿಚಯಗೊಂಡ ಮೇಲೆ ಇವರ ಸಾರ್ಥಕ ಕಲಾ ಸೇವೆ ಆರಂಭವಾಯಿತು. ಬಾಳಾ ಸಾಹೇಬರ ಆಸ್ಥಾನದಲ್ಲಿ ಇವರು ಸಾಗಿಸಿದ ಕಲಾಜೀವನವೇ ಇವರ ಜೀವನದ ಸುವರ್ಣ ದಿನಗಳಾಗಿದ್ದವು.

ಔಂಧ ಮಹಾರಾಜರ ಆಸ್ಥಾನ ಕಲಾವಿದರಾಗಿದ್ದ ಸಂದರ್ಭದಲ್ಲಿ ತಮ್ಮ ಬದುಕನ್ನು ಕಳೆದ ಇವರು ಆ ಸಂದರ್ಭದಲ್ಲಿ ಸುಖದ ಸುಪ್ಪತ್ತಿಗೆಯಲ್ಲಿ ಮೆರೆದರೆಂಬುದು ಅವರ ಬಾಯಿಯಿಂದಲೇ ತಿಳಿದು ಬಂದಿತ್ತಾದರೂ, ಆ ದಿನಗಳು ಬಹಳ ದಿನ ಉಳಿಯಲಿಲ್ಲ.

ಸ್ವಾತಂತ್ರ್ಯದ ನಂತರ ಸಂಸ್ಥಾನಗಳ ವಿಲೀಕರಣದ ತರುವಾಯ ಅಲ್ಲಿನ ಕಲಾವಿದರೆಲ್ಲಾ ಪಿಂಚಣಿ ಪಡೆದು ನಿರ್ಗತಿಕರಾಗಿ ದಿಕ್ಕು ಕಾಣದೇ ಎರಡೂ ರಾಜ್ಯದಲ್ಲಿ (ಕರ್ನಾಟಕ/ಮಹಾರಾಷ್ಟ್ರ) ಚದುರಿ ಹೋದರೂ ಅಲ್ಲಿಂದ ಪ್ರಾರಂಭವಾಯ್ತು. ವೀರಪ್ಪನ ದುಸ್ಥಿತಿ.

ಔಂದನ ರಾಜಾಶ್ರಯ ತಪ್ಪಿದ ಮೇಲೆ ಜನಾಶ್ರಯ ಇವರಿಗೆ ಕಬ್ಬಿಣದ ಕಡಲೆಯಾಗಿ, ನೇರವಾಗಿ ಮಾವನ ಊರಾದ ಕೊಟ್ಯಾಳಕ್ಕೆ ಮಾವನೊಂದಿಗೆ ಬಂದು ತಂಗಿದರು.

ಬರುವಾಗ ಖಾಲಿ ಬಂದರು.

ಇಲ್ಲಿ ಪಡಬಾರದ ಕಷ್ಟಪಟ್ಟರು.

ಆರೋಗ್ಯ ತೊಂದರೆ ಹಾಗೂ ನಿತ್ಯ ಊಟಕ್ಕೆ ಗತಿ ಇಲ್ಲದಂತಾಯ್ತು. ಕಲಾವಿದರಿಗೆ ಕೃತಿ ಮಾಡುವುದನ್ನು ಬಿಟ್ಟರೆ ಬೇರೆ ಕೆಲಸ ಗೊತ್ತಿರಲಿಲ್ಲ ಎಂಬ ಸಂಗತಿ ವಾಸ್ತವವಾಗಿತ್ತು.

ಪರಿಸ್ಥಿತಿ ವಿಪರ್ಯಾಸದಿಂದ ಹಿಟ್ಟಿನ ಗಿರಣಿಯಲ್ಲಿ ಕೆಳಗೆ ಬಿದ್ದ ಹಿಟ್ಟನ್ನು ದಾನರೂಪದಲ್ಲಿ ಪಡೆದು ತರುತ್ತಿದ್ದರು. ಶ್ರೀಮಂತ ಜನ ತಮ್ಮ ದನಕರುಗಳಿಗೆ ರಾತ್ರಿ ಇಡುತ್ತಿದ್ದ ತವಡು ಯಜಮಾನರಿಗೆ ಗೊತ್ತಾಗದಂತೆ, ಆಳುಗಳಿಂದ ಭಿಕ್ಷೆ ಬೇಡಿ ತಂದು ತಿಂದು ಉಪಜೀವನ ಸಾಗಿಸಿದ್ದರು.

ಇಷ್ಟಾದರೂ ಇವರ ಆರೋಗ್ಯ ಭಾಗ್ಯ ಎಲ್ಲರೂ ಮೆಚ್ಚುವಂತಹದೇ ಸರಿ. ದಿನಾಲು ಬೆಳಗಿನ 4 ಘಂಟೆಗೆ ಎದ್ದು ತಮ್ಮ ಎಲ್ಲಾ ಕೆಲಸಗಳನ್ನು ತಾವೇ ಮಾಡಿಕೊಂಡು ಯಾರಿಗೂ ಹೊರೆ ಆಗದ ರೀತಿಯಲ್ಲಿ ಶಿಥಿಲವಾಗಿದ್ದ ಮನೆಯಲ್ಲಿ ಹನ್ನೆರಡು ಜನರೊಂದಿಗೆ ವಾಸ ಮಾಡಿಕೊಂಡಿದ್ದರು. ಕರೆದಲ್ಲಿಗೆ ಹೋಗಿ ಕಲಾಸೇವೆ ಮಾಡಿ ಮಾತಿನ ಹೊಗಳಿಕೆಯೊಂದಿಗೆ ಮನೆಗೆ ಬರುತ್ತಿದ್ದರು.

ಸುಮಾರು 1932ನೇ ಇಸ್ವಿಗೆ ಭೀಮವ್ವ ಎಂಬುವಳೊಂದಿಗೆ ವೀರಪನವರಿಗೆ ವಿವಾಹವಾಗಿತ್ತು. 14 ಮಕ್ಕಳ ಸಂತಾನ ಅದರಲ್ಲಿ ಬದುಕುಳಿದವರು 3 ಗಂಡು 4 ಹೆಣ್ಣು. ಸದ್ಯ ಮೂರು ಹೆಣ್ಣು ಮಕ್ಕಳನ್ನು ಬಿಟ್ಟರೆ ಮಿಕ್ಕವರೆಲ್ಲ ಸ್ವರ್ಗಸ್ಥರು. ವೀರಪ್ಪ ಇವರ ಮಕ್ಕಳ ಹೆಸರು ಮಲ್ಲಪ್ಪಾ, ಅಂಬವ್ವಾ, ಉಷಾಬಾಯಿ, ಅಪ್ಪಣ್ಣಾ, ಕಮಲವ್ವಾ, ತಾತಪ್ಪಾ, ಶಾಂತಾಬಾಯಿ ಇವರುಗಳು ಮೊದಲಿಗೆ ವೀರಪ್ಪ ಕುಂಬಾರ ಅವರಲ್ಲಿ ರೇಖಾ ಚಿತ್ರ ಹಾಗೂ ಸ್ಮರಣ ಚಿತ್ರವನ್ನು ಬಿಡಿಸಲು ಕಲಿಯುತ್ತಿದ್ದರು. ಅನಂತರ ಮಣ್ಣಿನ ಗೊಂಬೆ ಮಾಡಿ ಸುತ್ತ ಮುತ್ತಲಿರುವ ಹಳ್ಳಿಗಳಿಗೆ ಹೋಗಿ ನಾನಾ ತರಹದ ಗೊಂಬೆಗಳನ್ನು, ಜನರ ಮನಸ್ಸು ಆಕರ್ಷಿಸುವಂತೆ ರಚನೆ ಮಾಡಿ ಮಾರುತ್ತಿದ್ದರು. ಅವರ ಕಲಾಕೃತಿಗಳ ಜನಪದ ಶೈಲಿಯಲ್ಲಿದ್ದುದರಿಂದ ಒಂದು ಗೊಂಬೆಗೆ ಒಂದು ಗಿದ್ನ (ತಪ್ಪಲಿಗೆ), ಜೋಳ ಮತ್ತು ಸ್ವಲ್ಪ ಹಣವನ್ನು ಕೊಡುತ್ತಿದ್ದರು. ಬಂದ ಹಣದಲ್ಲಿ ಕುಂಬಾರವರು ಜೀವನವನ್ನು ಸಾಗಿಸುತ್ತಿದ್ದರು.

ಈ ಸಂದರ್ಭದಲ್ಲಿ ವೀರಪ್ಪನವರು ಉತ್ತರ ಕರ್ನಾಟಕದ ಸುಸಂಸ್ಕೃತ ಜಿಲ್ಲೆಯೆಂದು ಖ್ಯಾತಿ ಹೊಂದಿದ, ಹನ್ನೆರಡನೆಯ ಶತಮಾನದ ಕ್ರಾಂತಿಪುರುಷನೆಂದೇ ಪ್ರಖ್ಯಾತಿಯಾದ ವಿಶ್ವ ಗುರು ಬಸವಣ್ಣನವರ ಜನ್ಮ ನೀಡಿದ ತಾಣವಾಗಿದೆ. ಇಂತಹ ಒಂದು ಸಾಂಸ್ಕೃತಿಕ ನಾಡು ಶರಣರ ಬೀಡು ಎಂಬೆಲ್ಲಾ ಪ್ರಸಿದ್ಧಿಯನ್ನು ಪಡೆದ, ವಿಜಾಪುರ ಬಸವನಬಾಗೇವಾಡಿ ತಾಲೂಕಿನ ಇಪ್ಪತ್ತು (20) ಕಿ.ಮೀ. ಅಂತರದಲ್ಲಿರುವ, ಬಸವನ ಬಾಗೇವಾಡಿಯಿಂದ ವಿಜಾಪುರಕ್ಕೆ ಹೋಗುವ ಮಾರ್ಗದಲ್ಲಿ ಬರುವ ಮನಗೂಳಿ ಗ್ರಾಮದಲ್ಲಿ ಕುಂಬಾರರು ಕುಟುಂಬ ಸಮೇತರಾಗಿ ನೆಲಸಿದರು. ಬೆಳ್ಳಿ ಪಾತ್ರೆಯಲ್ಲಿ ಉಂಡ ಕೈಗಳು ಮಣ್ಣಿನ ಪಾತ್ರೆ (ಪರಯಾಣ)ಯಲ್ಲಿ ಉಣ್ಣುವಂತಹ ಗಂಭೀರ ಪರಿಸ್ಥಿತಿ ಬಂದು ಇಷ್ಟಾದರೂ ಕಲೆಯ ಸೇವೆ ನಿಲ್ಲಿಸದೆ, ಕರೆದಲ್ಲಿಗೆ ಹೋಗಿ ಅವರ ಮನೆಗೆ ಸುಣ್ಣ ಬಣ್ಣ ಮಾಡಿ ಚಿತ್ರಗಳನ್ನು ಬಿಡಿಸಿ ಬರುವಾಗ, ಅವರು ಕೊಟ್ಟ ಎರಡು ರೊಟ್ಟಿ ಧೋತ್ರದಲ್ಲಿ ಮುಚ್ಚಿಟ್ಟುಕೊಂಡು ಮನೆಗೆ ಬಂದು ಮನೆಯಲ್ಲಿ ಮಕ್ಕಳು ಮೊಮ್ಮಕ್ಕಳೊಂದಿಗೆ ತಿಂದು ಕಾಲ ಕಳೆಯುತ್ತಿದ್ದರು.

ಬದುಕಿನ ಸಂಧ್ಯಾಕಾಲವನ್ನು ಕಳೆಯಲು ಮನಗೂಳಿ ಗ್ರಾಮದ ಜನತೆಯು ಕುಂಬಾರರಿಗೆ ಎಲ್ಲಾ ರೀತಿಯಲ್ಲಿಯೂ ಸಹಕಾರಿ ಮನೋಭಾವ ತೋರಿ ಪ್ರೋತ್ಸಾಹಿಸಿದ್ದರಿಂದಲೇ, ಸಾಕಷ್ಟು ಇವರ ಶಿಲ್ಪಗಳು ಈ ಗ್ರಾಮದಲ್ಲಿ ಇಂದಿಗೂ ಕಾಣುವಂತಾಗಿವೆ. 2005ನೇ ಸಾಲಿನಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ವಾರ್ಷಿಕ ಗೌರವ ಪ್ರಶಸ್ತಿ ಸ್ವೀಕರಿಸಿದ ಶಿಲ್ಪಿ ವೀರಪ್ಪ ಕುಂಬಾರರು ಕೊನೆಯ ದಿನಗಳಲ್ಲಿ ಚಿಕೂನ್‌ಗುನ್ಯ ಕಾಯಿಲೆಯಿಂದ ಚೇತರಿಸಿಕೊಂಡರೂ, ಮೂತ್ರಪಿಂಡದ ತೊಂದರೆಗಳಿಂದ 2006ರಲ್ಲಿ ಕೊನೆಯುಸಿರೆಳೆದರು.

ಅಂತಿಮ ದಿನಗಳಲ್ಲಿ ಕುಂಬಾರರ ಒಟ್ಟಿಗೆ ಮಗಳಾದ ಉಷಾಬಾಯಿ ಅಮಗೊಂಡ, ಮೊಮ್ಮಕ್ಕಳಾದ ನೀಲವ್ವ ಅಪ್ಪಣ್ಣ, ಕಸ್ತೂರಿ ತಾತಪ್ಪ ಹಾಗೂ ಇವರುಗಳ ಮಕ್ಕಳಾದ ಅನುಕ್ರಮವಾಗಿ ಭೀಮರಾವ್, ಕರುಣಾ ಹಾಗೂ ರಾಮಗೊಂಡ, ಶಿವಾನಂದ ಕುಂಬಾರ ಇವರುಗಳಿದ್ದರು. ಇವರುಗಳಲ್ಲಿ ಶಿವಾನಂದ ಕುಂಬಾರ ಶಿಲ್ಪಕಲೆಯಲ್ಲಿ ಪದವಿ ಶಿಕ್ಷಣವನ್ನು ಪಡೆದು ಶಿಲ್ಪಕಲಾವಿದನಾಗಿ ಬೆಳೆಯುತ್ತಿದ್ದಾನೆ.

2007–2008ನೇ ಸಾಲಿನಲ್ಲಿ ಇವರ ಜನ್ಮಶತಮಾನೋತ್ಸವವನ್ನು ಆಚರಿಸುತ್ತಿರುವ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಈ ಕೃತಿಯನ್ನು ಇವರ ಸವಿನೆನಪಿಗಾಗಿ ತಂದಿದೆ.



ಅಶ್ವರೂಢ ಸೂರ್ಯದೇವ



ರಾಜವಾಡೆಯ ಮಾಂಡಲೀಕ

# ಗ್ರಂಥಋಣ

*** ಕಲೆಯ ಅರ್ಥ**
ಮೂಲ : ರವೀಂದ್ರನಾಥ ಠಾಗೂರ್
ಕನ್ನಡಕ್ಕೆ : ಎಚ್.ಎಸ್. ಶ್ರೀಮತಿ
ಪ್ರಕಟಣೆ : ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು.
ಇಸವಿ : 1988

*** ದೃಶ್ಯಕಲಾ**
ಕೃತಿಕಾರರು : ಎನ್. ಮರಿಶಾಮಾಚಾರ್
ಪ್ರಕಟಣೆ : ಸಿ.ಎಂ.ಎನ್. ಪ್ರಕಾಶನ, ಬೆಂಗಳೂರು
ಇಸವಿ : 1988

*** ದಿ॥ ವೀರಪ್ಪ ಕುಂಬಾರ ಕೊಟ್ಯಾಳ್ಕರ್‌ರವರ ಶತಮಾನೋತ್ಸವ ಡಾ॥ ಎಸ್.ಸಿ. ಪಾಟೀಲ ಇವರ ಅಧ್ಯಕ್ಷತೆಯ ಭಾಷಣ 2007.**

*** ಕಲೆಯ ಕಣ್ಣೀರು**
ದಿನಾಂಕ 1.12.2002ರಲ್ಲಿ ಪ್ರಜಾವಾಣಿ ದಿನಪತ್ರಿಕೆಯಲ್ಲಿ ಶ್ರೀ ಬೂಸಗೊಂಡರವರ ಪ್ರಕಟಿತ ಲೇಖನ.

*** ವೀರಪ್ಪ ಕುಂಬಾರರ ಕಲೆ ಮತ್ತು ಬದುಕು**
ಡಾ॥ ಎಸ್.ಸಿ. ಪಾಟೀಲರ ಮಾರ್ಗದರ್ಶನದಲ್ಲಿ ವೀರಪ್ಪ ಕುಂಬಾರರ ಮರಿಮೊಮ್ಮಗ ಶಿವಾನಂದ ಕುಂಬಾರ ತಮ್ಮ ಶಿಲ್ಪಕಲಾ ಪದವಿ ವ್ಯಾಸಾಂಗದ ಸಂದರ್ಭದಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬಾದಾಮಿ ವಿಭಾಗಕ್ಕೆ ಸಲ್ಲಿಸಿರುವ ಪ್ರಬಂಧ.
*** ಪಾಶ್ಚಾತ್ಯ ಹಾಗೂ ಭಾರತೀಯ ಶಿಲ್ಪಕಲೆಯ ಸಮೀಕರಣ**

ಲೇಖಕರು : ಜಿ. ಲಕ್ಷ್ಮೀಪತಿ (ಅಪ್ರಕಟಿತ)



ಶಿಲ್ಪಕಲಾವಿದ ಶ್ರೀ ಜಿ. ಲಕ್ಷ್ಮೀಪತಿ ಇವರು ದೃಶ್ಯಕಲೆ, ರಂಗಭೂಮಿ, ಸಮಾಜಸೇವೆ ಇತ್ಯಾದಿ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಒಬ್ಬ ಸಾಂಸ್ಕೃತಿಕ ಸಂಘಟಕರು.

ಶಿಲ್ಪಕಲೆಯಲ್ಲಿ ಪದವಿ ಹಾಗೂ ಸ್ನಾತಕೋತ್ತರ ಪದವಿಯನ್ನು ಕರ್ನಾಟಕ ಚಿತ್ರಕಲಾ ಪರಿಷತ್ತು ಇಲ್ಲಿ ಯಶಸ್ವಿಯಾಗಿ ಪೂರೈಸಿ, ಕನ್ನಡ ವಿಶ್ವವಿದ್ಯಾಲಯ ಹಂಪಿಯ, ದೃಶ್ಯಕಲಾ ವಿಭಾಗದಲ್ಲಿ ಪಿಹೆಚ್.ಡಿ. ಅಧ್ಯಯನವನ್ನು ಡೀನ್ ಹಾಗೂ ಪ್ರೊಫೆಸರ್ ಆಗಿರುವ ಡಾ॥ ಎಸ್.ಸಿ. ಪಾಟೀಲ ಇವರ ಮಾರ್ಗದರ್ಶನದಲ್ಲಿ ಯುಜಿಸಿಯ ಜೆಆರ್‌ಎಫ್ ಮತ್ತು ಎಸ್‌ಆರ್‌ಎಫ್ ಫೆಲೋ ಆಗಿ ಅಧ್ಯಯನ ಮಾಡಿರುತ್ತಾರೆ.

ಕರ್ನಾಟಕ ಲಲಿತಕಲಾ ಅಕಾಡೆಮಿಯ ರಾಜ್ಯ ಮಟ್ಟದ ಕಲಾಶಿಬಿರಗಳು, ರಾಷ್ಟ್ರೀಯ ಲಲಿತಕಲಾ ಅಕಾಡೆಮಿಯ ರೀಜಿನಲ್ ಸೆಂಟರ್, ಚೆನ್ನೈನ ಶಿಲ್ಪಶಿಬಿರ, ಫಾಸಿಲ್ಸ್ ರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣ ಹಾಗೂ ಕಲಾಪ್ರದರ್ಶನಗಳಲ್ಲಿ ಭಾಗವಹಿಸಿ, ಚಿತ್ರಕಲೆ, ಶಿಲ್ಪಕಲಾ ಕ್ಷೇತ್ರದ ಬಗ್ಗೆ ಹಲವಾರು ಪ್ರಬಂಧಗಳನ್ನು ಮಂಡಿಸಿರುತ್ತಾರೆ.

ಕರ್ನಾಟಕ ಚಿತ್ರಕಲಾ ಪರಿಷತ್ತು, ಭಾರತೀಯ ವಿದ್ಯಾಭವನ, ದೆಹಲಿ ಕರ್ನಾಟಕ ಸಂಘ, ಮುಂತಾದೆಡೆಗಳಲ್ಲಿ ಆಜೀವ ಸದಸ್ಯರಾಗಿರುವ ಇವರು 2005-08ರ ಅವಧಿಯ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಸದಸ್ಯರಾಗಿದ್ದು, 2008ನೇ ಸಾಲಿನ ಜಕಣಾಚಾರಿ ಪ್ರಶಸ್ತಿ ಆಯ್ಕೆ ಸಮಿತಿಯ ಸದಸ್ಯರಾಗಿರುತ್ತಾರೆ.

ಸಮಕಾಲೀನ ಪ್ರತಿಷ್ಠಾಪನಾ ಕಲೆಯ ವಿನೂತನ ಪ್ರಯೋಗಗಳನ್ನು ಮಾಡಿರುವ ಇವರು ಟೆರ್ರಾಕೋಟಾ, ಶಿಲೆ, ಲೋಹ, ಫೈಬರ್ ಮಾಧ್ಯಮಗಳಲ್ಲಿ ಕೃತಿಗಳನ್ನು ರಚಿಸಿ, ಹಲವು ಶಿಬಿರಗಳ ನಿರ್ದೇಶಕರಾಗಿ, ಯಶಸ್ವಿ ಕಲಾವಿದರಾಗಿ ಶಿಲ್ಪಕಲಾ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡು ಉತ್ತಮ ಸ್ನೇಹಜೀವಿಯಾಗಿದ್ದಾರೆ.

ಪ್ರಸ್ತುತ ದಿವಂಗತ ಶಿಲ್ಪಿ ಶ್ರೀ ವೀರಪ್ಪ ಕುಂಬಾರ ಕೊಟ್ಯಾಳ್ಕರ್‌ರ ಜೀವನ ಮತ್ತು ಕಲಾಕೃತಿಗಳ ಬಗ್ಗೆ ಅವರು ಬದುಕಿದ್ದ ದಿನಗಳಲ್ಲಿ ನೇರವಾಗಿ ಸಂದರ್ಶಿಸಿ, ಮನುಗೂಳಿ ಹಾಗೂ ಔಂದ್‌ಗೆ ಭೇಟಿನೀಡಿ ವಿವರಗಳನ್ನು ಸಂಗ್ರಹಿಸಿ ಕುಂಬಾರರವರ ಜೀವಮಾನದ ಕಲಾದರ್ಶನವನ್ನು ಈ ಕೃತಿಯ ಮುಖಾಂತರ ಅನಾವರಣಗೊಳಿಸಿದ್ದಾರೆ.